# ಶಿಲ್ಪಿ

(ಆರು ಕತೆಗಳು)



ಆನಂದ್ ಬ್ರದರ್ಸ್
ಬೆಂಗಳೂರು
೧೯೪೯

# ಮುನ್ನುಡಿ

ನನ್ನ ಈ ಸಂಗ್ರಹದಲ್ಲಿ ಕಥನ ಕಲೆ, ತಂತ್ರಗಳಿಗೆ ಸ್ವಲ್ಪ ವೈಶಾಲ್ಯ ವನ್ನು ಕಲ್ಪಿಸುವ ಪ್ರಯತ್ನವನ್ನು ಓದುಗರು ಕಾಣಬಹುದು. ಒಂದು ಕತೆಯಲ್ಲಿ ಸೌಂದರ್ಯದ ಗುರಿಯೇನು ಎಂಬ ಪ್ರಶ್ನೆ, ಇನ್ನೊಂದು ಕತೆಯಲ್ಲಿ ಅಧ್ಯಾತ್ಮವೆಂದರೇನು ಎಂಬ ಪ್ರಶ್ನೆ, ಮತ್ತೊಂದರಲ್ಲಿ ತ್ಯಾಗದ ನೆಲೆಯಾವದು ಎಂಬ ಪ್ರಶ್ನೆಗಳು ತಲೆದೋರಿವೆ. ನನ್ನ ಗುರಿ ಎಷ್ಟರಮಟ್ಟಿಗೆ ಸಾಧಿಸಲಾಗಿದೆಯೆಂಬ ವಿಷಯ ನಾನು ಚರ್ಚೆ ಮಾಡ ಲೊಲ್ಲ. ಹಗುರವಾಗಿಯೂ, ಕ್ಷುಲ್ಲವಾಗಿಯೂ ಕಾಣುವ ಅನೇಕ ಜೀವನ ವಸ್ತುಗಳ ಹಿಂದೆ ಗಭೀರವಾದ ಸಮಸ್ಯೆ ನಿಂತಿರುತ್ತದೆ ಅವುಗಳನ್ನು ಗ್ರಹಿಸಲೆತ್ನಿಸಿ—ಬಿಡಿಸಬೇಕೇ ಬೇಡವೇ ? ಸಮಸ್ಯೆಗಳನ್ನು ಬಿಡಿಸುವುದು ಕಲಾವಿದನ ಅವಶ್ಯಕ ಕರ್ತವ್ಯವಲ್ಲ. ಆದರೆ ಕಲಾವಿದನೂ ಮಾನವ. ಮಾನವತೆಗೆ ಸಂಬಂಧಪಟ್ಟ ಪ್ರಶ್ನೆಗಳು ಅವನಿಗೂ ಸಂಬಂಧಪಟ್ಟವು. ಅವನು ಕಂಡ ಬೆಳಕಿನಿಂದ ಮಾನವತೆಯ ಕಲ್ಯಾಣ ಸಾಧಿಸದಿದ್ದರೂ ಸಾಧಿಸಬಹುದೆಂಬ ತತ್ತ್ವವನ್ನು ಬಿಡಿಸಿ, ಅವುಗಳ ಪರಿಹಾರ ಸೂಚಿಸು ವುದು ತಪ್ಪಲ್ಲ ಎಂದೆನಿಸಬಹುದು

ಈ ಸಂಗ್ರಹವನ್ನು ಪ್ರಕಟಿಸಲು ಸಂತೋಷದಿಂದ ಮುಂದೆ ಬಂದ ಮೆಸರ್ಸ್ ಆನಂದ್ ಬ್ರದರ್ಸ್ ಕಂಪೆನಿಯ ಶ್ರೀ ಜಿ. ಆರ್. ಆಚಾರ್ಯ ರವರಿಗೂ, ಮುದ್ದಾಗಿ ಮುದ್ರಿಸಿಕೊಟ್ಟಿರುವ ಮೆಸರ್ಸ್ ಡೆಕನ್ ಹೆರಾಲ್ಡ್ ಮುದ್ರಣಾಲಯದವರಿಗೂ ನನ್ನ ವಂದನೆಗಳು.

“ ಅನ್ನಪೂರ್ಣ ”  
ವಿಶ್ವೇಶ್ವರಪುರಂ, ಬೆಂಗಳೂರು ನಗರ  
೮. ೧೦. ೧೯೪೯

# ಪ ರಿ ವಿ ಡಿ

# ಶಿಲ್ಪಿ

ರಾಜಶಿಲ್ಪಿ ಊರಿಗೆ ಹಿಂದಿರುಗಿದ್ದ. ಊರಿನಲ್ಲೆಲ್ಲಾ ಅದೇ ಸುದ್ದಿ. ಅರಮನೆಯಿಂದ ಸೆರೆಮನೆಯವರೆಗೂ ಒಂದೇ ತೆರನ ಉತ್ಸಾಹ; ಕೋಲಾಹಲ. ಜನ ತಂಡ ತಂಡವಾಗಿ ಶಿಲ್ಪಿಯ ಮನೆಯ ಕಡೆ ಧಾವಿಸಿದರು. ಆದರ ಶಿಲ್ಪಿ ಯಾರಿಗೂ ದರ್ಶನ ಕೊಡಲಿಲ್ಲ.

'ಶಿಲ್ಪಿ ಬಂದಿರುವ ಸುದ್ದಿ ಸುಳ್ಳಿರಬಹುದು' ಎಂದು ಜನ ತರ್ಕ ಮಾಡಿದರು.

ಜನಕ್ಕೆ ಕಾಪಿನಭಟರೂ ಸರಿಯಾದ ಉತ್ತರ ಕೊಡಲಿಲ್ಲ.

'ಇದೆಲ್ಲಾ ದೊಡ್ಡ ಸಮಸ್ಯೆಯಾಗಿದೆ' ಎಂದು ಒಬ್ಬ ಜಾಣನಂದ.

ಅಭೇದ್ಯ ಸಮಸ್ಯೆಯನ್ನು ಯಾರೂ ಬಿಡಿಸಲಾಗಲಿಲ್ಲ.

ಜನ ನಿರಾಶರಾಗಿ ಹಿಂದಿರುಗುತ್ತಿದ್ದಾಗ ಶಿಲ್ಪಿ ತನ್ನ ಮನೆಯ ಕೈದೋಟದಲ್ಲಿ ಕುಳಿತಿದ್ದ. ಶಿಲಾಪೀಠದ ಮೇಲೆ ಅವನು ಪದ್ಮಾಸನಾಸೀನ. ಕೆಳಗೆ ಮೈನಾ ಕುಳಿತಿದ್ದಳು. ಅವಳು ಬಿಡಿಸಿ ಕೊಡುತ್ತಿದ್ದ ಕಿತ್ತಲೆ ಹಣ್ಣಿನ ಕುಸುಮುಗಳನ್ನು ಆಲಸ್ಯದಿಂದ ಬಾಯಿಗೆ ಹಾಕಿಕೊಳ್ಳುತ್ತಿದ್ದ. ಅವನ ಚಿತ್ತ ಎತ್ತಲೋ !

ಕೈಯಲ್ಲಿ ಕುಸುಮ ಹಾಗೇ ಇದ್ದುದನ್ನು ಕಂಡು ಮೈನಾ ಎಚ್ಚರಿಸಿದಳು. ಶಿಲ್ಪಿ ಕಣ್ದೆರೆದು ಅವಳನ್ನು ನೋಡಿದ. ಮಮತೆಯಿಂದ ಅವಳ ತಲೆ ನೇವರಿಸಿದ. ಮೈನಾ ನಿಜವಾಗಿ ಸುಂದರಿ. ಕಿತ್ತಲೆ ಬಣ್ಣ, ತುಂಬಿದ ಅಂಗಾಂಗ—ವಿಶಾಲವಾದ, ನೀಳವಾದ ಕೇಶರಾಶಿ.

ಅವಳ ಕಣ್ಣಿನಲ್ಲಿ ನೀರು ನಿಂತಿದ್ದುದನ್ನು ಕಂಡ ಶಿಲ್ಪಿ

" ಏಕೆ, ಮೈನಾ, ಅಳುತ್ತಿರುವೆ? "

ಮೈನಾ ಬಿಕ್ಕಿ ಬಿಕ್ಕಿ ಅತ್ತುಬಿಟ್ಟಳು.

" ಏಕೆ ಹೇಳು—ಅಳಬೇಡ. "

" ಎರಡು ವರ್ಷ ನನ್ನ ಬಿಟ್ಟು ಎಲ್ಲಿಗೆ ಹೋಗಿಬಿಟ್ಟಿದ್ದಿರಿ? "

" ಅದೊಂದು ಪ್ರಶ್ನೆ ಕೇಳಬೇಡ. ಅದು ನನ್ನ ರಹಸ್ಯ. "

" ನನ್ನಲ್ಲಿ ನೀವು ಯಾವ ಮುಚ್ಚುಮರೆಯನ್ನೂ ಮಾಡುವುದಿಲ್ಲವಲ್ಲ. "

" ಇಲ್ಲ. ಆದರೆ ಈ ಒಂದು ವಿಷಯ ಕೇಳಬೇಡ. ನಿನಗೆ ಸಮಾಧಾನ ಮಾಡಲು ಸುಳ್ಳುಹೇಳಲು ನಾನು ಬಯಸುವುದಿಲ್ಲ. "

" ಹೋಗಲಿ. ಮತ್ತೆ ಹೀಗೆ ನೀವು ಹೋಗುವುದಿಲ್ಲವೇ? "

" ಹೋಗುವುದಿಲ್ಲವೆಂದು ಕಾಣುತ್ತದೆ. "

" ಅನುಮಾನಪಟ್ಟುಕೊಂಡೇ ಹೇಳುವಿರಲ್ಲಾ. "

" ಜಗತ್ತಿನಲ್ಲಿ—ಜೀವನದಲ್ಲಿ ಯಾವದು ಸ್ಥಿರ. "

ತನ್ನ ಮಾತನ್ನೇ ಮೆಲಕುಹಾಕುತ್ತ ಶಿಲ್ಪಿ ತನ್ನ ಗಡ್ಡವನ್ನು ನೇವರಿಸಿಕೊಂಡ.

" ಮಣ್ಣು ಹದಮಾಡಲೇ? "

" ಈಗಲೇ ಬೇಡ. "

" ಕೆಲಸ ಯಾವಾಗ ಆರಂಭಿಸುವಿರಿ? "

" ಲಹರಿ ಬರಬೇಕು. "

ಕಾಪಿನಭಟ ಬಂದು ಅರಮನೆಯಿಂದ ಸಿರೂಪ ಬಂದಿರುವುದಾಗಿ ತಿಳಿಸಿದ. ಅರಮನೆಯ ಆಳು ತಂದಿತ್ತ ಸಿರೂಪವನ್ನು ಓದಿಕೊಂಡು ಶಿಲ್ಪಿ ಮುಖಗಂಟುಹಾಕಿಕೊಂಡ.

“ ಏನು ಕಾಗದ. ”

“ ಬರಬೇಕಂತೆ ! ದೊರೆ ಹೇಳಿ ಕಳಿಸಿದ್ದಾರೆ. ”

“ ಹೋಗುವಿರಾ ? ”

“ ಈಗಲೇ ಬರುತ್ತೇನೆಂದು ತಿಳಿಸು. ”

ಎಂದು ಅರಮನೆಯ ಆಳಿಗೆ ತಿಳಿಸಿ ಶಿಲ್ಪಿ ಎದ್ದ. ಮೈನಾ ಅವನ ಕೈಹಿಡಿದು

“ ಅಲ್ಲಿಗೆ ಹೋಗಬೇಡಿ. ”

“ ಏಕೆ ? ”

“ ನನಗೆ ಭಯವಾಗುತ್ತದೆ. ”

“ ಭಯವೇಕೆ ? ”

“ ಅರಮನೆಯ ಸಹವಾಸಬೇಡ. ನಾವು ಈ ಊರು ಬಿಟ್ಟು ಬಿಡುವ. ಎಲ್ಲಾದರೂ ದೂರ ಹೋಗಿ ಇದ್ದು ಬಿಡೋಣ. ನಡೆಯಿರಿ ನನ್ನ ಕಾಶ್ಮೀರ ಕರೆಯುತ್ತಿದೆ. ”

“ ನೀನು ಹುಚ್ಚಿ—ಮೈನಾ ” ಎಂದವಳ ಮೃದುಗಲ್ಲವನ್ನು ಮುದ್ದಿಸಿದ.

“ ಕಳೆದ ಬಾರಿ—ನೀವು ಅರಮನೆಯಿಂದ ಬಂದಿರಿ—ಅಂದೇ ರಾತ್ರಿ ಹೊರಟುಹೋದಿರಿ. ಅರಮನೆಯ ಸಹವಾಸವೆಂದರೆ ನನಗೆ ಮೈನಡುಕ ಬರುತ್ತದೆ. ”

“ ನಾನೊಬ್ಬ ಹುಚ್ಚನೆಂದು ಕಾಣೆಯಾ ? ”

“ ನಾನು ಕಾಣುವುದು ನನ್ನ ದೇವರನ್ನು. ಬೇರೆ ಏನೂ ನನಗೆ ಕಾಣಿಸದು. ”

“ ಮೈನಾ—ನೀನು ಸುಖವಾಗಿರಬೇಕೆಂಬುದು ನನ್ನ ಮಹದಾಸೆ. ”

“ ಅದು ನಾನು ಬಲ್ಲೆ. ”

“ ನಾನೊಂದು ಮಾತು ಹೇಳುವೆ—ಕೇಳುವೆಯಾ ? ”

“ ನೀವು ಆಜ್ಞೆಮಾಡಿದರೆ ಕೇಳುವೆ ? ”

“ ಇದು ಆಜ್ಞೆಯ ವಿಷಯವಲ್ಲ. ನೀನೇ ಮನಃಪೂರ್ವಕ ಒಪ್ಪಬೇಕು—ನನ್ನ ಬಲವಂತಕ್ಕಲ್ಲ. ”

" ಅದೇನು ಹೇಳಬಾರದೇ. "

" ನೀನು ನೆಮ್ಮದಿಯಾಗಿರುವಂತೆ ವ್ಯವಸ್ಥೆಮಾಡಿ ನಿನ್ನನ್ನು ಕಾಶ್ಮೀರಕ್ಕೆ ಕರೆದುಕೊಂಡುಹೋಗಿ ಬಿಡುತ್ತೇನೆ. ಆಗಬಹುದೇ ? "

ಮೈನಾ ಚಕಿತಳಾದಳು. ಧಾರಾಕಾರವಾಗಿ ಕಂಬನಿ. ಶಿಲ್ಪಿಯ ಪಾದಗಳಮೇಲೆ ಉರುಳಿದಳು. ಅವನ ಪಾದಗಳಿಗೆ ಕಣ್ಣೀರಿನ ಅಭಿಷೇಕ ವಾಯಿತು. ಶಿಲ್ಪಿ ಅವಳನ್ನು ಪ್ರೀತಿಯಿಂದ ಹಿಡಿದೆತ್ತಿ ಅಪ್ಪಿದ. ಅವಳ ಮುಂಗುರುಳನ್ನು ನೇವರಿಸುತ್ತಾ ಬಾರಿಬಾರಿಗೆ ಮುದ್ದಿಸಿದ.

" ನನ್ನ ಕೈ ಬಿಡಬೇಡಿ. "

" ಮೈನಾ ... "

" ನಾನು ನಿಮ್ಮ ದಾಸಿ. ಅದಕ್ಕಿಂತ ಹೆಚ್ಚೇನೂ ಬಯಸುವುದಿಲ್ಲ. ನನಗೆ ಒಡವೆ, ವಸ್ತ್ರ, ಸಂಪತ್ತು ಒಂದೂ ಬೇಡ. "

" ಅದು ... "

" ನನಗೆ ದ್ವೇಷವಿಲ್ಲ. ನೀವು ಬೇಕಾದವಳನ್ನು ತಂದಿಟ್ಟುಕೊಳ್ಳಿ. ಅವಳ ಸೇವೆಯನ್ನೂ ಮಾಡುತ್ತೇನೆ. ದೂರದಿಂದ ನಿಮ್ಮ ಸಂತೋಷ ನೋಡಿ ನಾನೂ ಸಂತೋಷಿಸುತ್ತೇನೆ. "

" ಅದಕ್ಕಾಗಿ ನಿನ್ನ ಹೋಗು ಎಂದು ಹೇಳುತ್ತಿದ್ದೇನೆಂದು ತಿಳಿದು ಕೊಂಡೆಯಾ ? "

" ಏತಕ್ಕಾಗಿಯಾದರೂ ಆಗಲಿ, ನನ್ನ ನೂಕಬೇಡಿ. ಈ ಎರಡು ವರ್ಷ ನಾನು ಬದುಕಿದ್ದುದು ಒಂದೇ ಆಸೆಯಮೇಲೆ—ನೀವು ಹಿಂದಿರುಗಿ ಬರುತ್ತೀರೆಂದು. ಈಗ ನನ್ನ ಅನಾಥಳನ್ನಾಗಿ ಮಾಡಿಬಿಡುವಿರಾ ? "

" ಅರಮನೆಗೆ ಹೋಗಲು ಹೊತ್ತಾಯಿತು. ದೊರೆ ಕೋಪಿಸಿ ಕೊಂಡಾರು ? "

" ಕೈಜೋಡಿಸಿ ಕೇಳಿಕೊಳ್ಳುತ್ತೇನೆ. ಅರಮನೆ ಸಹವಾಸ ಬಿಟ್ಟುಬಿಡಿ. "

" ಆಗಲಿ — ಆಗಲಿ "

ಎಂದು ಕೈಕೊಡವಿಕೊಂಡು ಶಿಲ್ಪಿ ಅರಮನೆಯತ್ತ ನಡೆದ.

ಮೈನಾ ಚಿಂತಿಸುತ್ತ ನಿಂತಳು. ಇಡೀ ಪ್ರಕೃತಿ ಚಕ್ರಾಕಾರವಾಗಿ ಸುತ್ತುತ್ತಿತ್ತು.

" ನಾನೇನು ಕೈಹಿಡಿದ ಹೆಂಡತಿಯೇ. ಅವರು ಬೇಕಾದ ಹಾಗೆ ಮಾಡಬಹುದು."

ಎಂದು ಸಮಾಧಾನ ತಂದುಕೊಳ್ಳಲೆತ್ನಿಸಿದಳು. ಅವಳ ಜೀವನದ ಪೂರ್ವಕಥೆ ಸ್ಮೃತಿಪಟಲದ ಮೇಲೆ ಸಾಗಿತು. ಮೈನಾ ಒಬ್ಬ ದೋಣಿ—ಮನೆಯವನ ಮಗಳು ಬನ್ನುವಿನಲ್ಲಿ. ಶಿಲ್ಪಿ ಒಮ್ಮೆ ಕಾಶ್ಮೀರ ಪ್ರವಾಸ ಹೋಗಿದ್ದಾಗ ದೋಣಿಗಾರನ ಅತಿಥಿಯಾಗಿದ್ದ. ಮೈನಾ ಅವನ ಪರಿಚರ್ಯೆ ಮಾಡಿದ್ದಳು. ಅವಳ ರೂಪ—ಗುಣಗಳಿಗೆ ಮನಸೋತ. ತಂದೆಗೆ ಹೇಳಿದ

" ಮೈನಾ ನನಗೆ ಬೇಕು. ಜತೆಯಲ್ಲಿ ಕಳಿಸಿಕೊಡುವೆಯಾ ? "

" ಹೇಗೆ ಸಾಧ್ಯ ಸರ್ಕಾರ. ಅವಳೇ ನಮಗೆ ಅನ್ನ. ಮೈನಾ ಇಲ್ಲದಿದ್ದರೆ ನನ್ನ ದೋಣಿಗೆ ಯಾರು ಬರುತ್ತಾರೆ. "

" ಇದು ಸಾಕೇ ನೋಡು "

ಎಂದು ಎರಡು ಸಾವಿರ ರೂಪಾಯಿಗಳನ್ನು ದೋಣಿಗಾರನಿಗೆ ಒಗೆದ ಶಿಲ್ಪಿ. ಊರಿಗೆ ಹಿಂದಿರುಗುವಾಗ ಮೈನಾ ಅವನ ಜತೆ ಬಂದಳು.

ಶಿಲ್ಪಿಯ ಮನೆಯಾಡಳಿತವೆಲ್ಲಾ ಕ್ರಮಕ್ರಮೇಣ ಮೈನಾ ಕೈ ಸೇರಿತು. ಅವನ ಶಿಲ್ಪ ಕ್ರಿಯೆಗೆ ಮಣ್ಣು ಹದ ಮಾಡುವವಳೂ ಅವಳೇ; ಅವನಿಗೆ ಮೂಲಪ್ರಕೃತಿ (Model) ಬೇಕಾದಾಗ ಅದಕ್ಕೆ ಕೂಡುತ್ತಿದ್ದವಳೂ ಅವಳೇ.

ಶಿಲ್ಪಿಯ ಜೀವನ ಮೈನಾ ಜತೆಯಲ್ಲಿಯೇ ಸಾಗಿತ್ತು. ಅವಳು ಎದುರಿಗೆ ಕುಳಿತಳೆಂದರೆ ಶಿಲ್ಪಿಯ ಕೈ ಮಿಂಚಿನಂತೆ ಓಡುತ್ತಿತ್ತು. ಅವನ ಕೃತಿಗಳಲ್ಲಿನ ಅಪೂರ್ವ ಸೌಂದರ್ಯ, ಸಮ ಪ್ರಮಾಣ, ಜೀವಸ್ಪಂದನಗಳ ಕೀರ್ತಿ ಮೈನಾಗೆ ಸಲ್ಲತಕ್ಕುದಾಗಿತ್ತು.

ಶಿಲ್ಪಿ ಅದನ್ನು ಚೆನ್ನಾಗಿ ಬಲ್ಲ. ತನ್ನ ಕೈಯಲ್ಲಿದ್ದ ಜೇಡಿಮಣ್ಣು ಮೈನಳ ಅಮೃತಸ್ಪರ್ಶದಿಂದ ಸಜೀವಮೂರ್ತಿಯಾಗುತ್ತಿದ್ದುದನ್ನು ಅವನು ಗಮನಿಸಿದ್ದ. ಅವನ ಹೃದಯದಲ್ಲಿ ಮೈನಳಿಗೆ ವಿಶಿಷ್ಟಸ್ಥಾನ.

ಆದರೆ ಅಷ್ಟೇ ತಳಮಳ....ಅಷ್ಟೇ ಅಸಮಾಧಾನ. ತನ್ನ ಪ್ರತಿಭೆ ಮೈನಳ ದಾಸಿಯಾಗಿರಬೇಕೆ? ತನ್ನ ಪ್ರತಿಭೆಯ ಓಘವನ್ನು ವಿಚಾರಮಾಡುತ್ತ ಒಮ್ಮೊಮ್ಮೆ 'ಅವಳಿಲ್ಲದಿದ್ದರೇನು?' ಅಂದುಕೊಳ್ಳುವನು. ಆದರೆ ಮೈನಳ ಸ್ಪರ್ಶವಿಲ್ಲದ ಕೃತಿ ನೀರಸವಾಗುತ್ತಿತ್ತು. ಹೊರಗಣ್ಣಿಗೆ ಅವೂ ಪರಿಪೂರ್ಣ; ಆದರೆ ಶಿಲ್ಪಿಗೆ ಅವುಗಳಿಂದ ಸಮಾಧಾನವಿಲ್ಲ. 'ಏನೋ ಸಾಲದು' ಅಂದುಕೊಳ್ಳುವನು.

ಆದರೆ ಅವನ ಹೃದಯದಲ್ಲಿ ಹುದುಗಿದ್ದ ಜ್ವಾಲಾಮುಖಿಯನ್ನು ಯಾರೂ ಕಾಣರು—ಅವನೂ ಕಾಣ! ಶಿಲ್ಪಿ ತನ್ನ ಕೀರ್ತಿಶಿಖರವನ್ನು ಮುಟ್ಟಿದ್ದ. ಅವನ ಕೃತಿಗಳನ್ನು ಸಂಗ್ರಹಿಸಲು ರಾಜ ಮಹಾರಾಜರು ಹಾತೊರೆಯುತ್ತಿದ್ದರು. ಜನ ಅವನನ್ನು ದೇವರಂತೆ ಆರಾಧಿಸುತ್ತಿತ್ತು; ಶಿಲ್ಪಿ ಸಂಪತ್-ಸಾಗರದಲ್ಲಿ ಓಲಾಡುತ್ತಿದ್ದ. ಅವನ ಮನೆ ನಾಯಿ ಕೂಡ ಚಿನ್ನದ ತಣಿಗೆಯಲ್ಲಿ ಊಟಮಾಡುತ್ತಿತ್ತು. ಆದರೂ ಅವನಿಗೆ ಅತೃಪ್ತಿ! ಜೀವನದಲ್ಲಿ ಬೇಸರ.

ಮೈನಾ ತನ್ನ ಪರಿಶುದ್ಧ, ನಿಷ್ಕಾಮ, ನಿಷ್ಕಳಂಕ ಪ್ರೇಮವನ್ನು ಶಿಲ್ಪಿಗೆ ಧಾರೆಯೆರೆದಿದ್ದಳು. ಚಿನ್ನದಂಥ ಮೈ, ಚಿನ್ನದಂಥ ಮನಸ್ಸು—ಒಂದೊಂದು ಬೆಳದಿಂಗಳ ರಾತ್ರಿ—ಬಿಸಿಲು ಮಾಡದ ಮೇಲೆ ರೇಷ್ಮೆಯ ಮೃದುಹಾಸಿನ ಮೇಲೆ ಮೈನಾ ಮಲಗುತ್ತಿದ್ದಳು. ಉಡುಗೆ ತೊಡಿಗೆ ಯಿಲ್ಲದ ಆ ನಿಸರ್ಗ ಸುಂದರಿಯ ರಮ್ಯವಿಲಾಸವನ್ನು ಎವೆಯಿಕ್ಕದೆ ಶಿಲ್ಪಿ ನೋಡುತ್ತಿದ್ದ. ಅವನ ಕಣ್ಣುಗಳಲ್ಲಿ ಆ ಚಿತ್ರ ಅಚ್ಚೊತ್ತಿತ್ತು. ಆದರೂ ಪ್ರತಿಯೊಂದು ಸಾರಿ ನೋಡಿದಾಗಲೂ ಅವನಿಗೆ ಆ ನೋಟ ವಿನೂತನ. ಮೈನಾ ಒಳಗೆ ಅಡಗಿ ಕುಳಿತಿದ್ದ ಕಳೆಗಳು ಒಂದೊಂದೇ ಕಾಣಿಸಿಕೊಂಡಂತಾಗುತ್ತಿತ್ತು. ಅವಳ ಸ್ನಿಗ್ಧ ಸೌಂದರ್ಯವನ್ನು ನೋಡುತ್ತ ನೋಡುತ್ತ ಶಿಲ್ಪಿ ಮತ್ತನಾಗುತ್ತಿದ್ದ. ಇದೋ! ದೇವಶಿಲ್ಪಿಯ ಪರಿಪೂರ್ಣ ಕೃತಿ ಇದು ಎಂದು ಡಂಗುರ ಸಾರಬೇಕೆಂಬ ಹಂಬಲ ಅವನನ್ನು ಆವರಿಸುತ್ತಿತ್ತು.

ತನ್ನ ಹಂಬಲವನ್ನು ಹಲಸಾರಿ ಶಿಲ್ಪಿ ಡಂಗುರ ಸಾರಿಯೂ ಇದ್ದ. ಅವಳನ್ನು ಮೂಲಕೃತಿಯಾಗಿ ಮಾಡಿಕೊಂಡು ತನ್ನ 'ವನಸುಂದರಿ'

ಯನ್ನು ರಚಿಸಿದ್ದ. ಅವಳ ಎಳನಗೆ, ಅಸ್ವಾದಿತ ತುಟಿ, ಚುಚ್ಚು ಕಣ್ಣು, ಅವನ ಶಿಲ್ಪದಲ್ಲಿ ಮೂರ್ತೀಭವಿಸಿದ್ದವು.

'ವನಸುಂದರಿ' ಯನ್ನು ಕಂಡು ಮೋಹಿತನಾದ ಅರಸ ಶಿಲ್ಪಿಯನ್ನು ಬರಮಾಡಿಕೊಂಡು ತನ್ನ ವಿಲಾಸಗೃಹವನ್ನು ಅವನಿಂದ ಅಲಂಕರಿಸಿದ್ದ. 'ಅಭಿಸಾರಿಕೆ' 'ಪರಿತ್ಯಕ್ತೆ' 'ನಿರೀಕ್ಷೆ' ಗಳೆಲ್ಲದರಲ್ಲಿಯೂ ಮೈನಳ ವಿಲಾಸ ಹಲವು ರೂಪ ಹಲವು ಭಾವ ಧರಿಸಿ ನಿಂತಿದ್ದವು. ಮೈನಳ ಸೌಂದರ್ಯಕ್ಕೆ ಶಿಲ್ಪಿ ಅಪುರ ಕಾಣಿಕೆ ಸಲ್ಲಿಸಿದ್ದ.

ಶಿಲ್ಪಿ ತನ್ನ ವಿಜಯೋನ್ಮಾದದಲ್ಲಿ ಮೈ ಮರೆಯಬಹುದಾಗಿತ್ತು. ಅದಕ್ಕೆ ಅವನಿಗೆ ಅಧಿಕಾರ, ಅನುಕೂಲ ಎರಡೂ ಇದ್ದುವು. ಆದರೂ ಅವನು ನಿತ್ಯ ಅತೃಪ್ತ.

ದೊರೆಯ ಬರುವನ್ನು ಕಾಯುತ್ತ ಶಿಲ್ಪಿ ವಿಲಾಸ ಗೃಹದಲ್ಲಿ ಅವನಿಗಾಗಿ ಕಾದ.

ಅಲ್ಲಿ ಅವನೊಬ್ಬನೇ – ತನ್ನ ಕೃತಿರತ್ನಗಳ ನಡುವೆ ಕಲಾವಿದ ಪ್ರತಿಷ್ಠಿತನಾದ. ಒಮ್ಮೆ ವನಸುಂದರಿಯ ಕುರುಳುತೀಡುವನು—ಒಮ್ಮೆ ಅಭಿಸಾರಿಕೆಯ ಕಣ್ಣು ನೇವರಿಸುವನು—ಒಮ್ಮೆ ಪರಿತ್ಯಕ್ತೆಯ ತಲೆ ಸವರಿ ಅವಳನ್ನು ಸಮಾಧಾನ ಮಾಡುವನು ಅವುಗಳನ್ನು ನೋಡುತ್ತ ನೋಡುತ್ತ ಒಮ್ಮೆಲೇ ಮುಖವನ್ನತ್ತ ತಿರುಗಿಸಿದ. ರಾಜಗೃಹದತ್ತ ವಿಶಾಲ ಪರ್ವತವೊಂದು ಭೂಮ್ಯಾಕಾಶಗಳನ್ನು ಏಕಮಾಡಿ ನಿಂತಿತ್ತು. ಆ ಪರ್ವತವನ್ನು ನೋಡುತ್ತ ನೋಡುತ್ತ 'ಅದನ್ನು ಕಡೆಯ ಬಲ್ಲನಾದರೆ— ಅದಕ್ಕೆ ನನ್ನ ಪ್ರತಿಭೆಯ ಜೀವ ಹಚ್ಚಿ ಕಲಾಕೃತಿಯನ್ನಾಗಿ ಮಾಡಬಲ್ಲೆನಾದರೆ .... ..ಎಂದುಕೊಂಡು' ನಿಟ್ಟುಸಿರ್ಗರೆದ.

ದೊರೆ ಬಂದಿರುವುದಾಗಿ ಆಳು ತಿಳಿಸಿದ. ಶಿಲ್ಪಿ ದೊರೆಗೆ ನಮಿಸಿ ಭಕ್ತಿಯಿಂದ ನಿಂತ. ದೊರೆ ಶಿಲ್ಪಿಯ ಬಳಿ ಬಂದು ಅವನ ಕೈಹಿಡಿದು ಪಕ್ಕದಲ್ಲಿ ಕುಳ್ಳಿರಿಸಿಕೊಂಡ.

"ನನ್ನ ಶಿಲ್ಪಿ ಇಂದು ಖುಷಿಯಾಗಿರುವನೇ ?"

"ಇಲ್ಲ ಪ್ರಭೂ....ಗಡ್ಡ ಬೆಳಸಿರುವನು ?"

"ಇದೇನೀ ಪರಿವರ್ತನೆ."

" ತಾರುಣ್ಯ ನೀಗಿಕೊಂಡ ಮಾನವ ಗಾಂಭೀರ್ಯಕ್ಕೆ ಕೈಹಾಕುತ್ತಿದ್ದಾನೆ. ಬಾಳಿನ ಬಯಲಾಟದಲ್ಲಿ ಒಂದು ಸೋಗು."

" ಶಿಲ್ಪಿ— ನೀನು ಬಹಳ ಬದಲಾಯಿಸಿರುವೆ."

" ಪ್ರಭುಗಳ ಮಾತಿಗೆ ಪ್ರತಿಹೇಳುವುದು ಅಪಚಾರವಾದೀತು."

" ನೀನು ನನ್ನ ಗೆಳೆಯ ಶಿಲ್ಪಿ—ನಾನು ನಿನ್ನ ಪ್ರಭುವಲ್ಲ—ಭಕ್ತ"

" ದೊಡ್ಡ ಮಾತು."

" ನಿಜವಾಗಿ ಶಿಲ್ಪಿ ನನ್ನ ಮಾತು ನಂಬು. ನಾವು ರಾಜ ಮಹಾರಾಜರು ಅಳಿದು ಹೋದ ಎಷ್ಟೋ ಶತಮಾನಗಳಾನಂತರವೂ ನೀನು ಅಮರಜೀವಿ. ಜನ ನಮ್ಮನ್ನು ಇರುವಾಗ ಆರಾಧಿಸುತ್ತಾರೆ— ಅನಂತರ ಮರೆಯುತ್ತಾರೆ."

" ನಮ್ಮನ್ನು ಇರುವಾಗ ಮರೆಯುತ್ತಾರೆ."

" ಈ ಆಕ್ಷೇಪಣೆ ನೀನು ಎತ್ತಲಾರೆ ?"

" ಹೌದು ಪ್ರಭೂ.... ನಾನೂ ನಿಮ್ಮ ವರ್ಗಕ್ಕೆ ಸೇರಿರುವೆ. ನನ್ನನ್ನೂ ಜನ ಮುಂದೆ ಮರೆಯುತ್ತಾರೆ."

" ಶಿಲ್ಪಿ, ಇಷ್ಟು ದಿವಸ ಎಲ್ಲಿಗೆ ಹೋಗಿದ್ದೆ. ಇದೇನು ನಿನ್ನ ವೈರಾಗ್ಯ."

" ಪ್ರಭೂ ಅದು ನನ್ನ ರಹಸ್ಯ."

" ಹೋಗಲಿ ಬಿಡು."

" ನನ್ನನ್ನು ಬರಮಾಡಿಕೊಂಡುದೇತಕೆ ?"

" ರಾಜಕುಮಾರಿಯನ್ನು ಕಂಡಿರುವೆಯಲ್ಲಾ."

" ಕಂಡಿರುವೆ—ದೂರದಿಂದ."

" ಅವಳ ಮೂರ್ತಿ ಮಾಡಿಕೊಡಬೇಕು."

ಶಿಲ್ಪಿ ಅನುಮಾನಿಸುತ್ತ ನಿಂತ.

" ಏಕೆ ಶಿಲ್ಪಿ ಅನುಮಾನಿಸುವೆ ?"

ಶಿಲ್ಪಿ ನಿರುತ್ತರನಾದ.

" ಅವಳನ್ನೊಮ್ಮೆ ನೋಡು."

" ಅಗತ್ಯವಿಲ್ಲ ಪ್ರಭೂ—ನೋಡಿರುವೆ."

" ಹಾಗಾದರೆ. "

" ಕ್ಷಮಿಸಬೇಕು. ಈ ಶಿಲ್ಪ ನಾನು ಮಾಡಲಾರ. "

ಅರಸನ ಮುಖ ಪುಬ್ಬುಗಂಟಿಕ್ಕಿತು.

" ತಮಗೆ ಕೋಪ ಬರಬಹುದು. "

' ಬಂದೇ ಇದೆ. "

" ನನ್ನನ್ನು ಕೆಲಸದಿಂದ ನಿವೃತ್ತಿ ಮಾಡಿಕೊಡಬೇಕೆಂದು ಬೇಡುತ್ತೇನೆ. ''

ಅರಸನ ಕೋಪವಿಳಿಯಿತು. ಮುಖದಲ್ಲಿ ಧಾವಂತ.

" ಏಕೆ ಶಿಲ್ಪಿ ನಿನಗೆ ಇಲ್ಲಿ ಏನು ಕಡಿಮೆಯಾಗಿದೆ. ''

" ಏನೂ ಇಲ್ಲ. ''

" ಬೇರೆ ಯಾವ ರಾಜಾಸ್ಥಾನಕ್ಕೆ ಹೋಗುವೆ. ''

" ತಮ್ಮನ್ನು ಬಿಟ್ಟು ನಾನು ಬೇರೆ ಅರಸನನ್ನು ಆಶ್ರಯಿಸುವುದಿಲ್ಲ. "

" ಹಾಗಾದರೆ ಈ ನಿವೃತ್ತಿಯ ಯೋಚನೆಯೇಕೆ? "

" ಅತೃಪ್ತಿಯಿಂದ. ''

" ನಿನಗೆ ಬೇಕಾದುದನ್ನು ತೆಗೆದುಕೋ ಶಿಲ್ಪಿ. ನನ್ನ ಮಧುವನ ಬೇಕೇ—ಪದವಿಬೇಕೇ—ಬುಟ್ಟಿ ಬುಟ್ಟಿ ವಜ್ರ ವೈಢೂರ್ಯ ಬೇಕೇ—ಕಣ್ಮನ ದಣಿಸುವ ಸುಂದರಿಯರು ಬೇಕೇ ? "

" ನನಗೆ ಯಾವುದೂ ಬೇಡ ಪ್ರಭೂ. "

" ನಿನಗೆ ಬೇಕಾದುದೇನು ತಿಳಿಸು. "

" ಸ್ವಾತಂತ್ರ್ಯ. "

" ನೀನು ನನ್ನ ಬಂದಿಯಲ್ಲವಲ್ಲಾ. ನನ್ನ ಶಿಲ್ಪಿ—ನನ್ನ ಗೆಳೆಯ. ''

" ನನಗೆ ಬೇಕಾದುದನ್ನು ಮಾಡುವ ಬಿಡುವ ಸ್ವಾತಂತ್ರ್ಯ. "

" ಶಿಲ್ಪಿ .. ಒಂದು ಒಪ್ಪಂದಕ್ಕೆ ಬರೋಣ. "

" ಅದು ಏನು ಮಹಾ ಪ್ರಭೂ. "

" ನೀನು ರಾಜಕುಮಾರಿಯ ಶಿಲ್ಪವೊಂದನ್ನು ಮಾಡಿ ಕೊಡು—ಅನಂತರ ನೀನು ಸ್ವತಂತ್ರ; ನಾನು ಮತ್ತೆ ನಿನ್ನನ್ನು ಕಾಡಿಸುವುದಿಲ್ಲ. "

ಶಿಲ್ಪಿ ಯೋಚನಾಮಗ್ನನಾದ.

" ಶಿಲ್ಪಿ, ಇದನ್ನು ನೀನು ನಿರ್ವಹಿಸಲೇ ಬೇಕು. ನನಗಾಗಿ—ನನ್ನ ರಾಜ್ಯಕ್ಕಾಗಿ. ನಿನ್ನ ದೇಶಕ್ಕಾಗಿ."

" ವಿವರಿಸಬಹುದೇ ? "

" ನೋಡು . . ದೇಶದ ದೊರೆ ಬಲಿಷ್ಠ. ಅವನಿಗೆ ನನ್ನ ರಾಜ್ಯದ ಮೇಲೆ ಬಹು ದಿವಸದಿಂದ ಕಣ್ಣಿದೆ."

" ಅದಕ್ಕೂ ನನ್ನ ಶಿಲ್ಪಕ್ಕೂ ಏನು ಸಂಬಂಧ ? "

" ಸಂಬಂಧವಿದೆ. ಆ ದೊರೆಯ ಮಗ ಅವಿವಾಹಿತ. ರಾಜಕುಮಾರಿಯ ಶಿಲ್ಪ ಅವನ ಕಣ್ಣಿಗೆ ಒಪ್ಪರೆ ಲಗ್ನ ಕೂಡಿದಂತೆ. ಆದರ ಪುಣ್ಯ ನಿನ್ನದು—ದೇಶವನ್ನು ರಕ್ಷಿಸಿ ಎರಡು ರಾಜಮನೆತನಗಳನ್ನು ಕೂಡಿಸಿದ ಪುಣ್ಯ ನಿನ್ನದು."

ಶಿಲ್ಪಿ ಮತ್ತೆ ಯೋಚನಾಮಗ್ನನಾಗಿ ತಟ್ಟನೆ

" ಒಪ್ಪಂದ ದಿಟವೇ? ತಾವು ಮತ್ತೆ ನನ್ನನ್ನು ಬೇರ ಕೃತಿ ನಿರ್ಮಾಣಕ್ಕೆ ನಿಯೋಜಿಸುವುದಿಲ್ಲವೇ?"

" ಇಲ್ಲ ಶಿಲ್ಪಿ—ಕುಲದೇವತೆಯಾಣೆ."

" ಆಗಲಿ ಪ್ರಭು."

ದೊರೆ ಹರ್ಷೋನ್ಮಾದದಲ್ಲಿ ಕುಣಿದು ಬಿಟ್ಟ. ಶಿಲ್ಪಿಯನ್ನಪ್ಪಿ ಅವನನ್ನು ವಿಶ್ವಾಸದಿಂದ ಬೀಳ್ಕೊಟ್ಟ

ಮನೆಗೆ ಬಂದ ಮೇಲೆ ಪ್ರ್ಯಸಳಿಗೆ ನಾಲ್ಕೇ ಮಾತಿನಲ್ಲಿ ನಡೆದುದನ್ನು ವಿವರಿಸಿದ. " ಈ ಕೃತಿಯಾದ ಮೇಲೆ ನನಗೆ ಮುಕ್ತಿ" ಎಂದು ಹಿಗ್ಗಿನಿಂದ ತಿಳಿಸಿದ.

ಕೆಲಸದಿಂದ ನಿವೃತ್ತಿಯಾಗುವ ಸುದ್ದಿ ಕೇಳಿ ಪ್ರ್ಯಸಾ ಹಿರಿಹಿರಿ ಹಿಗ್ಗಿದಳು.

ಅರಮನೆಯ ಮಹಡಿಯ ಪೂರ್ವಭಾಗ ಶಿಲ್ಪಿಯ ಕರ್ಮಶಾಲೆ ಆಯಿತು. ಅದನ್ನು ತನಗೆ ಬೇಕಾದಂತೆ ಅಣಿಮಾಡಿಕೊಂಡ. ನಾಲ್ಕು ಕಡೆಯಿಂದ ಬೆಳಕು ಬರುವ ವ್ಯವಸ್ಥೆ ಮಾಡಿದ. ತೊಟ್ಟಿಯ ಮಧ್ಯೆ ಒಂದು ವೇದಿಕೆ. ಆದರ ಮೇಲೆ ಶಿಲ್ಪದ ಅಸ್ಥಿಪಂಜರವನ್ನು ಪ್ರತಿಷ್ಠಾಪಿಸಿ

ಅದನ್ನು ಮಣ್ಣಿನಿಂದ ತುಂಬಿದ. ಪಕ್ಕದಲ್ಲಿ ಮತ್ತೊಂದು ವೇದಿಕೆ, ರಾಜಕುಮಾರಿ ಬಂದು ಕುಳಿತುಕೊಳ್ಳಲು.

ಶುಭದಿವಸ ನೋಡಿ ಶಿಲ್ಪಿ ಕೆಲಸಕ್ಕೆ ಕೈ ಹಚ್ಚಿದ. ಭಾವೋದ್ದೀಪನದಿಂದ ಅವನ ಮುಖ ಸಂಜೆಗೆಂಪಿನಂತೆ ರಾಗರಂಜಿತವಾಗಿತ್ತು. ಕೈಯಲ್ಲಿ ಕಾರಣೆ ಹಿಡಿದ, ಪೂರ್ಣಮೂರ್ತಿಯನ್ನು ಬಿಡಿಸಿದ. ತಲೆ, ಮೈ, ಕೈಕಾಲುಗಳು ಅಸ್ಪಷ್ಟವಾಗಿ ಸೃಷ್ಟಿಯಾದವು.

ಕೈ ತಟ್ಟಿ ಚೇಟಿಯನ್ನು ಕರೆದು

" ರಾಜಕುಮಾರಿಯನ್ನು ಬರಮಾಡು. "

ತೆಳು ರೇಷ್ಮೆಯ ಸೀರೆ ಉಟ್ಟು, ದೇಹದ ವಿಲಾಸ ಮರೆಸದಂತೆ ಆಭರಣ ತೊಟ್ಟು ರಾಜಕುಮಾರಿ ಬಂದಳು.

ಅವಳ ವಿಲಾಸ—ರೂಪ—ಯೌವನ ನೋಡಿ ಶಿಲ್ಪಿ ಅವಾಕ್ಕಾದ. ರಾಜಕುಮಾರಿ ನಸುನಗುತ್ತಾ

" ಮಾತಾಡು ಶಿಲ್ಪಿ. ನಾನು ಎಲ್ಲಿ ನಿಲ್ಲಲಿ—ಹೇಗೆ ನಿಲ್ಲಲಿ. "

ಆಕೆಗಾಗಿ ನಿರ್ಮಿತವಾಗಿದ್ದ ವೇದಿಕೆಯ ಕಡೆ ಕೈ ತೋರಿಸಿದ.

ರಾಜಕುಮಾರಿ ಅದರ ಮೇಲೆ ನಿಂತಳು.

ಶಿಲ್ಪಿ ಅಲ್ಲಿ ಇಲ್ಲಿ ತೆರೆಗಳನ್ನು ವ್ಯತ್ಯಾಸಮಾಡಿ ಅವಳ ಮುಖದ ಮೇಲೆ ನೆಳಲು ಬೆಳಕು ಚೆನ್ನಾಗಿ ಮೂಡುವಂತೆ ಮಾಡಿದ. ಅವಳ ಬಳಿಸರಿದು ನಿಲುಭಂಗಿಯನ್ನು ತೋರಿದ. ರಾಜಕುಮಾರಿ ಅವನನ್ನು ಅನುಕರಿಸಿದಳು.

" ಕುತ್ತಿಗೆ ಸ್ವಲ್ಪ ಎಡಕ್ಕೆ ಮಣಿಯಲಿ ...ಇನ್ನೂ ಸ್ವಲ್ಪ....ಸ್ವಲ್ಪ.... "

" ಇನ್ನು ಹೇಗೆ ಶಿಲ್ಪಿ. "

ಶಿಲ್ಪಿ ಅವಳ ಬಳಿ ಸಾರಿ ಗಲ್ಲಹಿಡಿದು ಕುತ್ತಿಗೆಯನ್ನು ತನಗೆ ಬೇಕಾದ ರೀತಿಯಲ್ಲಿ ವಾಲಿಸಿದ. ಆ ಸ್ಪರ್ಶ ಅವನನ್ನು ಚಕಿತನನ್ನಾಗಿ ಮಾಡಿತು. ಕೈಯಲ್ಲಿ ಒಂದು ಅಳತೆಗೋಲು ಹಿಡಿದು ಅವಳ ಮುಖ—ದೇಹ ಪ್ರಮಾಣವನ್ನು ಅಳತೆಮಾಡಿದ. ಆ ಅಳತೆಯನ್ನು ತನ್ನ ಮೂರ್ತಿಗೆ ಹಚ್ಚಿ ಹೋಲಿಸಿನೋಡಿದ.

ರಾಜಕುಮಾರಿ ನಿಜವಾಗಿ ದಿವ್ಯಸುಂದರಿ. ಅನಾಘ್ರಾತ ಕುಸುಮ. ತುಂಬಿದ ಹಾಲುಗೆನ್ನೆಗಳು. ಯೌವನದ ಪತಾಕೆಗಳಂತೆ ಎದ್ದು ನಿಂತಿದ್ದ ಕುಚದ್ವಯ. ಕಡೆದು ಮಾಡಿದ್ದಂತಿದ್ದ ಕೃಶಕಟಿ—ತುಂಬು ನಿತಂಬ. ಅವಳ ಮೈಚರ್ಮ ಮುಖಮಲ್ಲನ್ನು ಅಲ್ಲಗಳೆಯುತ್ತಿತ್ತು. ಅದೊಂದು ದೈವಶಿಲ್ಪಿಯ ಅಭೂತಪೂರ್ವಕೃತಿ.

ಶಿಲ್ಪಿ ಅವಳ ಅಂಗಾಂಗಗಳನ್ನು ದಿಟ್ಟಿಸಿ ನೋಡಿದ. ಅವಳ ಸೌಂದರ್ಯದ ಶರಾಘಾತದಲ್ಲಿ ಅವನ ಕೈ ಓಡದು. ಮನಸ್ಸನ್ನು ಬಿಗಿ ಹಿಡಿದ. ಆ ದಿವ್ಯಮೂರ್ತಿಯ ಜೀವಕಳೆಯನ್ನು ತನ್ನ ಮೃಣ್ಮೂರ್ತಿಗೆ ಧಾರೆಯೆರೆಯಲೆತ್ನಿಸಿದ.

ಹಗಲಿರುಳೂ ಶಿಲ್ಪಿ ತನ್ನ ಕೃತಿಯಲ್ಲಿ ನಿಮಗ್ನನಾದ. ಒಂದು ಮಂಡಲ ಕೆಲಸಮಾಡಿರಬಹುದು. ಕೃತಿ ಆಕಾರ ತಳೆಯುತ್ತ ಬಂತು. ರಾಜಕುಮಾರಿಯೇ ಅದನ್ನು ಆಸೆಯಿಂದ ಈರ್ಷೆಯಿಂದ ನೋಡುವಂತಾಯಿತು.

ಒಂದು ಪೂರ್ಣ ಹುಣ್ಣಿಮೆಯ ರಾತ್ರಿ ಕೃತಿಯನ್ನು ಮುಗಿಸಿದ. ಬೆಳದಿಂಗಳಿನ ತಂಪು ಬೆಳಕಿನಲ್ಲಿ ಅದನ್ನು ತಾನು ದಿಟ್ಟಿಸಿನೋಡಿದ. ಕರ್ಮ ಕುಶಲತೆ ತಾಂಡವವಾಡಿತ್ತು. ಯಾರೂ ಎಲ್ಲಿಯೂ ದೋಷ ತೆಗೆಯುವಂತಿರಲಿಲ್ಲ.

ಅದನ್ನು ನೋಡುತ್ತ ನೋಡುತ್ತ ಶಿಲ್ಪಿ ವಿಕರ್ಷಣೆಯಿಂದ ಮುಖ ತಿರುಗಿಸಿ ಅದಕ್ಕೊಂದು ಅವಕುಂಠನ ಹಾಕಿ

"ಪ್ರಹರೀ" ಎಂದು ಕೂಗಿದ.

ಪ್ರಹರಿ ಬಂದು ಕೈ ಮುಗಿಯಲು

"ಕೃತಿ ಮುಗಿಯಿತೆಂದು ಪ್ರಭುಗಳಿಗೆ ತಿಳಿಸು. ಇದೋ ಬೀಗದ ಕೈ ಅವರ ಕೈಗೇ ಕೊಡು."

"ನೀವು...."

"ನಾನು ಮನೆಗೆ ಹೋಗುತ್ತೇನೆ."

ಎಂದು ಅಲ್ಲಿ ನಿಲ್ಲದೆ ಹೊರಟು ಬಿಟ್ಟ.

ಮೈನಾ ಅವನಿಗಾಗಿ ರಾತ್ರಿಯೆಲ್ಲಾ ಕಾದು ಕಾದು ಹೊಸಲು

ಪಕ್ಕದಲ್ಲಿ ತೋಳನ್ನು ತಲೆದಿಂಬು ಮಾಡಿಕೊಂಡು ಮಲಗಿಬಿಟ್ಟಿದ್ದಳು. ಶಿಲ್ಪಿ ಅವಳನ್ನು ಕರುಣೆ -- ಕನಿಕರಗಳಿಂದ ದಿಟ್ಟಿಸಿ ನೋಡಿ ತನ್ನ ಶಾಲು ತೆಗೆದು ಹೊದೆಸಿದ

ಹೊತ್ತು ಮೂಡಿ ಎಷ್ಟೋ ಹೊತ್ತಾದ ಮೇಲೆ ಮೈನಳಿಗೆ ಎಚ್ಚರವಾಯಿತು. ತನ್ನ ಮೈಮೇಲಿದ್ದ ಶಾಲು ಕಂಡು ಬೆಚ್ಚಿ ಶಿಲ್ಪಿಯನ್ನರಸಲು ಎದ್ದಳು.

ಶಿಲ್ಪಿ ಆಗಲೇ ಕರ್ಮಶಾಲೆ ಸೇರಿಬಿಟ್ಟಿದ್ದ ಆರೂವರೆ ಅಡಿ ಅಸ್ಥಿ ಪಂಜರ ಕಟ್ಟಿ ಅದಕ್ಕೆ ಮಣ್ಣು ಮೆತ್ತುತ್ತಿದ್ದ. ಮೈನಾ ಮೆಲ್ಲಗೆ ಅವನ ಬಳಿಸರಿದು

"ಯಾವಾಗ ಬಂದಿರಿ?"

"ಬಂದೆರಡು ಗಂಟೆಯಾಗಿರಬಹುದು "

"ನನ್ನ ಎಬ್ಬಿಸಬಾರದಾಗಿತ್ತೆ?"

"ನನ್ನ ಶಬರಿಯ ನಿದ್ರಾ ಭಂಗ ಮಾಡಲೇ?"

"ಅರಮನೆಯ ಕೆಲಸ ಮುಗಿಯಿತೇ?"

"ಇದೇ ವರ್ಷಕಾಲಕ್ಕೆ ಮುಗಿಸಿದೆ?"

"ಹೇಗ ಬಂದಿದೆ."

"ದೊರೆ ಮೆಚ್ಚಬಹುದು."

"ನಿಮಗೆ. —"

"ನನ್ನ ಮಾತು ಬೇಡ."

"ರಾಜಕುಮಾರಿ ಬಹಳ ಸುಂದರಿಯಂತೆ!"

"ಹೌದು. ದಿವ್ಯಸುಂದರಿ."

"ನಿಮ್ಮ ಪ್ರತಿಭೆ, ಅವಳ ಸೌಂದರ್ಯ — ಹಾಲಿಗೆ ಸಕ್ಕರೆ ಬೆರೆದಂತೆ!"

"ಹೌದು — ಆದರೆ ಹಾಲು ಒಡೆದು ಹೋಗಿದೆ."

"ಸ್ವಾಮಿ ... ಹಾಗೆ ಹೇಳಬೇಡಿ. ತಮ್ಮ ಪ್ರತಿಭೆಗೆ ಎಂದಿಗೂ ಮುಕ್ಕಿಲ್ಲ."

"ನನ್ನ ಪ್ರತಿಭೆಗಿಲ್ಲ. ಅವಳ ಸೌಂದರ್ಯಕ್ಕಿದೆ."

" ನೀವೇ ಅಂದಿರಿ ಅವಳು ದಿವ್ಯಸುಂದರಿಯೆಂದು."

" ಸಾಮಾನ್ಯ ಕಣ್ಣುಗಳಿಗೆ ದಿವ್ಯ ಸುಂದರಿ .... ಆದರೆ ದಿವ್ಯ ಕಣ್ಣುಗಳಿಗೆ ...."

" ಸಾಮಾನ್ಯಳೇ ? "

" ಹೌದು. "

" ನಿಮಗೆ ಹೇಗಿರಬೇಕು ಸೌಂದರ್ಯ ಸ್ವಾಮಿ."

" ಹೀಗೆ .... "

ಎಂದು ಗಂಭೀರವಾಗಿ ತನ್ನ ಅಸ್ಥಿಪಂಜರದ ಕಡೆ ತಿರುಗಿದ. ಅದನ್ನೇ ಮೈನಾ ಕ್ಷಣಕಾಲ ನೋಡಿ ಕಿಲಕಿಲನೆ ನಕ್ಕಳು.

" ಹೀಗೆಯೋ ? .. ಹೀಗೆಯೋ ? .... "

" ಹೌದು, ಮಾನವ ಸೌಂದರ್ಯದಲ್ಲಿ ಇದಕ್ಕಿಂತ ಹೆಚ್ಚಿನದೇನಿದೆ ? "

ಎಂದ. ಅವನ ಮುಖದಲ್ಲಿ ಮೂಡಿದ್ದ ಕಾಠಿಣ್ಯವನ್ನು ಕಂಡು ಮೈನಾ ಮೆಲ್ಲನೆ ಅಲ್ಲಿಂದ ಸರಿದಳು.

ಶಿಲ್ಪಿ ನಾಲ್ಕು ತಾಸು ದುಡಿದಿದ್ದ. ಮಣ್ಣು ಮೆತ್ತುವ ಕೆಲಸ ಮುಗಿಯುತ್ತ ಬಂದಿತ್ತು. ತನ್ನ ಕೈಯಲ್ಲಿದ್ದ ನೀಳವಾದ ಒಂದು ಚಾಕುವಿನಿಂದ ಕಟ್ಟಡದ ಅನವಶ್ಯಕ ಭಾಗಗಳನ್ನು ಕೆರೆಯುತ್ತಿದ್ದ. ಮೈನಾ ಕಾಣಿಸಿಕೊಂಡಳು.

" ಏನು ಬಂದೆ ? "

" ಅರಮನೆಯಿಂದ ಜನ ಬಂದಿದ್ದಾರೆ "

" ಈಗ ನೋಡಲು ಸಾಧ್ಯವಿಲ್ಲವೆಂದು ಹೇಳು. "

" ನೋಡಲೇ ಬೇಕಂತೆ. "

" ಸರಿ. ಇಲ್ಲಿಗೇ ಬರಮಾಡು. "

ಕಟ್ಟಡದ ಮೇಲೆ ಅವಕುಂಠನ ಹಾಕಿದ.

ಅರಮನೆಯ ಜನ ಐದಾರು ತಟ್ಟೆಗಳನ್ನು ತಂದು ಸಾಲಗಿಟ್ಟು ಅವುಗಳ ತೆರೆಗಳನ್ನು ತೆಗೆದರು. ಕಣ್ಣು ಕುಕ್ಕುವ ವಜ್ರ, ವೈಢೂರ್ಯ, ಮುತ್ತು, ಕೆಂಪು, ನೀಲ ರಾಶಿ; ಮನಮೋಹಿಸುವ ವಸ್ತ್ರಭೂಷಣಗಳು

" ಪ್ರಭು ಕಳುಹಿಸಿದ್ದಾರೆ. ತಾವು ಸ್ವೀಕರಿಸಬೇಕು. "

ಅವುಗಳನ್ನು ಕಂಡು ಶಿಲ್ಪಿ ಮುಖ ಗಂಟಿಕ್ಕಿ
"ತೆಗೆದುಕೊಂಡು ಹೋಗಿ — ನನಗೆ ಬೇಕಿಲ್ಲ."
"ನಿರಾಕರಿಸಿದರೆ ಪ್ರಭುಗಳು ಮುನಿದಾರು!"
"ಯಾರ ಮುನಿಸಿನಿಂದ ನನಗೇನು?"
ಮೈನಾ ಮಧ್ಯೆ ಬಾಯಿ ಹಾಕಿ
"ಅವರು ಪ್ರೀತಿಯಿಂದ ಕಳುಹಿಸಿದುದನ್ನು ನಿರಾಕರಿಸಲೇಕೆ?"
ಶಿಲ್ಪಿ ಒಮ್ಮೆ ಅವಳ ಕಡೆಗೆ ತೀಕ್ಷ್ಣನೋಟವೊಂದನ್ನು ಬೀರಿ
"ಆಗಲಿ — ಬಿಟ್ಟು ಹೋಗಿ"

ಎಂದ. ಮೈನಾ ನಿಂತೇ ಇದ್ದಳು. ಶಿಲ್ಪಿ ಒಂದು ವಜ್ರದ ತುಂಡನ್ನೆತ್ತಿಕೊಂಡ, ಇನ್ನೊಂದು ಕೈಯಲ್ಲಿ ಜೇಡಿಮಣ್ಣಿನ ಒಂದು ಸಣ್ಣ ಉಂಡೆ

"ಮೈನಾ ... ಇದೇನು ಬಲ್ಲೆಯಾ?"

"ಮಣ್ಣಿನ ಉಂಡೆ."

"ಇದು ...."

"ವಜ್ರದ ತುಂಡು."

"ಜನ ಇದಕ್ಕೆ (ವಜ್ರಕ್ಕೆ) ಬೆಲೆ ಕೊಡುವುದು; ನಾನು ಇದಕ್ಕೆ (ಮಣ್ಣಿನ ಉಂಡೆಗೆ) ಬೆಲೆ ಕೊಡುತ್ತೇನೆ."

ಮೈನಾ ಮೌನಳಾಗಿದ್ದಳು.

"ಏಕೆ ಬಲ್ಲೆಯಾ? ವಜ್ರಕ್ಕೆ ವಜ್ರವೆಂದು ಬೆಲೆ. ಮಣ್ಣಿಗೆ ಕಲಾವಿದನ ಪ್ರತಿಭೆಯ ಪ್ರತೀಕವೆಂದು ಬೆಲೆ. ಒಂದರಲ್ಲಿ ಕಲ್ಲಿಗೆ ಬೆಲೆ ಇನ್ನೊಂದರಲ್ಲಿ ಕಲೆಗೆ ಬೆಲೆ."

"ನಾನು ಇವುಗಳನ್ನು ಆಶಿಸಲಿಲ್ಲ. ದೊರೆಗೇಕೆ ವೃಥಾ ಕೋಪ ವೆಂದು ಸ್ವೀಕರಿಸಿರೆಂದೆ.

"ಇವುಗಳನ್ನು ಇಲ್ಲಿಂದ ಸಾಗಿಸು."

ಮೈನಾ ತಟ್ಟೆಗಳನ್ನೆತ್ತಿಕೊಂಡು ಹೋಗಲು ಶಿಲ್ಪಿ ತನ್ನ ಮಂದಿರದ ಬಾಗಿಲು ದೂಡಿ, ಶಿಲ್ಪದ ಮೇಲಣ ಅವಕುಂಠನ ತೆಗೆದ.

ದಿನ ದಿನಗಳುರುಳಿದವು, ತಿಂಗಳುಗಳು ಕಳೆದವು — ಶಿಲ್ಪಿ ತನ್ನ ಕೃತಿಯಲ್ಲಿ ತಲ್ಲೀನನಾದ. ಮೈನಾ ಒತ್ತಾಯಮಾಡಿದಾಗ ತಾನೇ ಹೊರಬಂದು ಸ್ನಾನ ತೀರಿಸಿ, ಊಟದ ಶಾಸ್ತ್ರಮಾಡಿ ಮತ್ತೆ ಮಂದಿರ ಸೇರುತ್ತಿದ್ದ. ಒಳಗೆ ಬರಕೂಡದೆಂದು ಮೈನಳಿಗೆ ಕಟ್ಟಾಜ್ಞೆಯಾಗಿತ್ತು.

ಮೈನಾ ಅವನ ಮಂದಿರದ ಬಾಗಿಲಿಗೊರಗಿ ಕುಳಿತುಕೊಳ್ಳು ತ್ತಿದ್ದಳು. ನಿದ್ದೆ ಬಂದರೆ ಅಲ್ಲಿಯೇ ಹೊಸಲಿಗೆ ತಲೆಗೊಟ್ಟು ಮಲಗಿ ಬಿಡುವಳು. ಅವಳಿಗೊಂದೇ ತೃಪ್ತಿ .... ಒಳಗೆ ತನ್ನ ಪ್ರಾಣದೇವರು ಇದ್ದಾರೆ. .... ಅದೋ, ಅವರದೇ ಹೆಜ್ಜೆಯ ಧ್ವನಿ ... ಅದಕ್ಕಿಂತ ಹೆಚ್ಚಿನ ಸಂಗೀತ ಅವಳಿಗೆ ಬೇಕೇ ?

ಒಂದು ದಿನ ಮೈನಾ ಮಲಗಿದ್ದಳು. ರಾತ್ರಿ ೨—೩ ಗಂಟೆಯಿರ ಬಹುದು. ಶಿಲ್ಪಿ ಮಂದಿರದ ಬಾಗಿಲು ತೆಗೆದು ಹೊರಬಂದ. ಇಂದು ಮೈನಳನ್ನು ಎಚ್ಚರಿಸುವುದಕ್ಕೆ ಹಿಂದು ಮುಂದು ನೋಡಲಿಲ್ಲ.

"ಮೈನಾ .... ಮೈನಾ .... ಮೈನಾ !"

ಮೈನಾ ಗಾಬರಿಯಾಗಿ ಎದ್ದು ಕುಳಿತಳು.

"ಇಲ್ಲಿ ಬಾ"

ಎಂದು ಸುಖಾಸನದ ಮೇಲೆ ಪವಡಿಸಿದ. ಮೈನಾ ಹತ್ತಿರ ಕುಳಿತಳು. ಪ್ರೀತಿಯಿಂದ ಅವಳನ್ನು ನೇವರಿಸಿ ಮುದ್ದಿಸಿದ.

"ಮೈನಾ ..."

"ಕೃತಿ ಮುಗಿಯಿತೇ ಪ್ರಭು .... ?"

"ಮುಗಿದಂತೆಯೆ."

"ನಾನು ನೋಡಬಹುದೇ?"

"ನಾಳೆ .... ನಾಳೆ ... ನಿನಗೆ .... ಜಗತ್ತಿಗೇ ನನ್ನ ಕೃತಿಯನ್ನು ಅರ್ಪಿಸಿಬಿಡುತ್ತೇನೆ."

ಮೈನಾ ಅವನ ಹಣೆ, ಮೈ ಮುಟ್ಟಿನೋಡಿ,

"ಪ್ರಭು ... ಜ್ವರ ಬಂದಿದೆ."

"ಏನು ಬೇಕಾದರೂ ಬರಲಿ .... ಇನ್ನು ಭಯವಿಲ್ಲ."

ಮೈನಾ ಉಪಚರಿಸಿದಳು. ಅಂದೇ ಶಿಲ್ಪಿ ನಿದ್ರಿಸಿದ್ದು.

ಬೆಳಿಗ್ಗೆ ಶಿಲ್ಪಿ ಏಳುವ ಹೊತ್ತಿಗೆ ಬಿಸಿಲೇರಿತ್ತು. ತನ್ನ ಆಲಸ್ಯವನ್ನು ಶಪಿಸುತ್ತ ಎದ್ದು ಸ್ನಾನ ಮುಗಿಸಿ

"ಮೈನಾ...."

"ಸ್ವಾಮಿ...."

"ಮಂದಿರಕ್ಕೆ ಹೋಗುತ್ತೇನೆ. ಇದು ನನ್ನ ಪರೀಕ್ಷೆಯ ದಿನ. ನಿನ್ನ ಶಿಲ್ಪ ವಿಜಯಿಯಾಗಲಿ ಎಂದು ಹರಸು."

"ಹರಸುವುದಕ್ಕೆ ನಾನು ಯಾರು?"

"ನನ್ನ ಪ್ರೇಮಲಕ್ಷ್ಮೀ."

ಮೈನಳ ಮುಖದಲ್ಲಿ ಒಂದು ದೈವಿಕ ಪ್ರಭೆ ರಾರಾಜಿಸಿತು.

"ನಿಮ್ಮ ಕೃತಿ ಅಮರವಾಗಲಿ."

ಶಿಲ್ಪಿ ತೃಪ್ತನಾಗಿ ಮಂದಿರ ಸೇರಿದ.

ಇಂದು ಅವನ ಹೃದಯದಲ್ಲಿ ವಿಚಿತ್ರ ಭಯ ಹುಟ್ಟಿತ್ತು. ಇದು ಅವನ ಮೊದಲನೆಯ ಕೃತಿಯಲ್ಲ — ಮಹಾಶಿಲ್ಪಿ — ನೂರಾರು ದಿವ್ಯ ಕೃತಿಗಳನ್ನು ರಚಿಸಿ ವಿಶ್ವವಿಖ್ಯಾತನಾಗಿದ್ದ ಕಲಾವಿದ .... ಆದರೂ — ಮಕ್ಕಳಂತೆ ನಡುಗುತ್ತಿದ್ದ.

ಶಿಲ್ಪದ ಕೆಲಸವೆಲ್ಲವನ್ನೂ ಹಿಂದಿನ ರಾತ್ರಿಯೇ ಮುಗಿಸಿದ್ದ. ಉಳಿದಿದ್ದುದು ಒಂದೇ ಭಾಗ.... ಕಣ್ಣುಗಳನ್ನು ತಿದ್ದಿ ಅದಕ್ಕೆ ದೃಷ್ಟಿಪಾಟ ಕೊಡುವುದು. ಕೈಗೆ ಕತ್ತಿಯನ್ನೆತ್ತಿಕೊಂಡು ಅವಕುಂಠನ ತೆಗೆದ.

ತನ್ನ ಅಭೂತಪೂರ್ವ ಕೃತಿಯ ದಿವ್ಯ ಸೌಂದರ್ಯವನ್ನು ನೋಡಿ ಶಿಲ್ಪಿ ಅವಾಕ್ಕಾದ. "ಇದನ್ನು ನಾನೇ ರಚಿಸಿದೆನೇ" ಎಂದು ತನ್ನನ್ನೇ ಕೇಳಿಕೊಂಡ.

ವಿಜಯವೈಭವದಲ್ಲಿ ಅವನ ಕೈ ನಡುಗುತ್ತಿತ್ತು. ಮೈಬೆವರಿನಿಂದ ಬಟ್ಟೆ ಮುದ್ದೆಯಾಗಿತ್ತು.

ಧೈರ್ಯ ತಂದುಕೊಂಡ — ತನ್ನ ಆರಾಧ್ಯ ದೇವತೆಯನ್ನು ಮನಸ್ಸಿನಲ್ಲಿಯೇ ವಂದಿಸಿದ.

ಕತ್ತಿಯಿಂದ ಮೆಲ್ಲನೆ ಕಣ್ಣುಗಳನ್ನು ಬಿಡಿಸತೊಡಗಿದ. ಎಷ್ಟು ಹೊತ್ತು ಕಳೆಯಿತೋ ಶಿಲ್ಪಿ ಕಾಣ — ಕಣ್ಣಿನ ಕೆಲಸ ಮುಗಿಯಿತು.

ಶಿಲ್ಪವನ್ನು ಅವನು ನೋಡಲಿಲ್ಲ. ಸ್ವಲ್ಪ ಹೊತ್ತು ಶಿಲ್ಪದಿಂದ ಮುಖ ಮರೆಸಿಕೊಂಡು ಒಮ್ಮೆಲೇ ಅತ್ತ ತಿರುಗಿದ.

ಅವನು ಕಂಡ ನೋಟ ಅವನನ್ನು ಅಧೀರನನ್ನಾಗಿ ಮಾಡಿತು. ದೇಹಾದ್ಯಂತ ಕಂಪಿಸತೊಡಗಿತು. ಅವನ ಮುಖ ಅಪಾರಯಾತನೆ ಯಿಂದ ಕಪ್ಪಾಯಿತು. ಎಡದಿಂದ, ಬಲದಿಂದ, ದೂರ ನಿಂತು, ಸಮೀಪ ಬಂದು ಶಿಲ್ಪವನ್ನು ದಿಟ್ಟಿಸಿ ದಿಟ್ಟಿಸಿ ನೋಡಿದ. ಮನಸ್ಸು ಅಸ್ತವ್ಯಸ್ತ ವಾಯಿತು. ರಾಕ್ಷಸ ರೋಷ ಅವನನ್ನಾವರಿಸಿತು. ಕೈಯಲ್ಲಿದ್ದ ಕತ್ತಿಯಿಂದ ಶಿಲ್ಪವನ್ನು ಹೊಡೆದ. ಅದನ್ನು ಮತ್ತೆ ಮತ್ತೆ ಇರಿದ— ಶಿಲ್ಪ ಚೂರು ಚೂರಾಗಿ ಕೆಳಗುರುಳಿತು. ಉದ್ವೇಗ ಇಮ್ಮಡಿಸಿತು — ನೂರ್ಮಡಿಸಿತು ....

" ಮೈನಾ ..." ಎಂದು ಚೀರಿದ.

ಮೈನಾ ಒಳಗೆ ಬರಲು ಯತ್ನಿಸಿದಳು. ಬಾಗಿಲು ಬಂಧಿತವಾಗಿತ್ತು. ಶಿಲ್ಪಿಯ ಚೀತ್ಕಾರ ಅವಳನ್ನು ಅಧೀರಳನ್ನಾಗಿ ಮಾಡಿತು. ತನ್ನ ಸರ್ವ ಶಕ್ತಿಯನ್ನೂ ಉಪಯೋಗಿಸಿ ಬಾಗಿಲನ್ನು ನೂಕಿದಳು. ಒಳಗೆ ಹಾಕಿದ ಚಿಲುಕ ಮುರಿದು ಬಿತ್ತು — ಬಾಗಿಲು ದಢಾರನೆ ತೆರೆಯಿತು.

ಮೈನಾ ಒಳಗೆ ಧಾವಿಸಿದಳು. ಶಿಲ್ಪ ಮುರಿದುಬಿದ್ದಿರುವುದನ್ನು ಕಂಡಳು. ಕೆಳಗೆ ಶಿಲ್ಪಿ .... ಅವನ ಎದೆಯಿಂದ ಧಾರೆಧಾರೆಯಾಗಿ ರಕ್ತ ಪ್ರವಾಹ. ಶಿಲ್ಪಿಯನ್ನೆತ್ತಿ ತನ್ನ ತೊಡೆಯಮೇಲೆ ಮಲಗಿಸಿಕೊಂಡಳು .... ಅವನ ಎದೆಯಲ್ಲಿ ಚಾಕು ನೆಟ್ಟಿದ್ದುದನ್ನು ಕಂಡಳು. ಅವಳ ದುಃಖದ ಕಟ್ಟೆಯೊಡೆಯಿತು.

" ಸ್ವಾಮಿ .... ಏನು ಮಾಡಿಬಿಟ್ಟಿರಿ ?"

" ಮೈನಾ ...."

ಶಿಲ್ಪಿ ತುಂಬ ನಿಶ್ಶಕ್ತನಾಗಿದ್ದ. ಬಹು ಪ್ರಯಾಸದಿಂದ ಮಾತುಗಳು ಅವನ ಬಾಯಿಂದ ಹೊರಬೀಳುತ್ತಿದ್ದವು.

" ಮೈನಾ .... ಅಲ್ಲಿ ನೋಡು .... ನನ್ನ ಪರಿಪೂರ್ಣ ಕೃತಿ."

" ಕೃತಿ ಪೂರ್ಣವಾಗಲಿಲ್ಲವೆಂದು ಹೀಗೆ ಮಾಡಬಹುದೇ ? "

" ಮೈನಾ .... ಕನಸು ಒಡೆಯಿತು."

" ಏನಾಯಿತು ಸ್ವಾಮಿ .... ?"

" ಸತ್ಯವನ್ನೆದುರಿಸಲಾರದೆ ಹಿಮ್ಮೆಟ್ಟಿದೆ."

" ಬಿಡಿಸಿ ಹೇಳಿ."

" ನೋಡು ... ಪರಿಪೂರ್ಣ ಸೌಂದರ್ಯವನ್ನು ಕಲೆಯ ಎರಕದಲ್ಲಿ ಹೊಯ್ಯಬೇಕೆಂದು ಸಂಕಲ್ಪಿಸಿದೆ. ಎರಡು ವರ್ಷ ನಾನು ದೇಶಾಂತರ ಹೋಗಿದ್ದುದು ನೆನಪಿದೆಯೇ ?"

" ಇದೆ."

" ಆಗ ಎಲ್ಲ ಊರುಗಳನ್ನೂ ಸಂಚರಿಸಿದೆ. ಜಗತ್ತಿನ ಅತಿ ಸುಂದರ ಹೆಣ್ಣಿನ ಅತಿ ಸುಂದರವಾದ ದೇಹ ಭಾಗವನ್ನು ಮನದಲ್ಲಿ ಅಚ್ಚೊತ್ತಿದೆ. ಕಾಶ್ಮೀರದ ಹಾಲುಗೆನ್ನೆ .... ಪಂಜಾಬಿನ ಕೋಮಲ ಕಟಿ.... ತಮಿಳರ ತುಂಬು ಎದೆ.... ಆಂಧ್ರರ ಭವ್ಯ ನಿತಂಬ... ನಿನ್ನ ತೊಡೆಗಳು. .. ಹೀಗೇ .... ಇವುಗಳನ್ನೆಲ್ಲಾ ಒಂದು ಕೃತಿಯಲ್ಲಿ ಮೂಡಿಸಿ ಬಿಟ್ಟರೆ ಅತ್ಯಂತ ಸುಂದರ.... ಆದರ್ಶ ಸುಂದರ ಸ್ತ್ರೀಯನ್ನು ನಿರ್ಮಿಸ ಲಾಗುವುದು ಎಂದು ನಿರ್ಧರಿಸಿದೆ ...."

" ಮುಂದೆ ?"

" ಹಾಗೇ ಶಿಲ್ಪ ನಿರ್ಮಾಣಮಾಡಿದೆ."

" ಕೃತಿ ಹೇಗಾಯಿತು ?"

" ಏನು ಹೇಳಲಿ — ಅದೊಂದು ಸರ್ವಸಾಧಾರಣ ಕೃತಿ ಯಾಯಿತು .. ಸಾಮಾನ್ಯ ಸ್ತ್ರೀಯ ಪ್ರತಿಕೃತಿಯಾಯಿತು."

" ಅದಕ್ಕಿಂತಹ ತ್ಯಾಗವೇ ?"

" ಮೈನಾ ..ನಾನು ಪರಿಪೂರ್ಣ ಸೌಂದರ್ಯವೆಂದು ನಂಬಿದ್ದುದೇ ಮೋಸ ... ಪರಿಪೂರ್ಣವೆಂಬುದು ಸಾಮಾನ್ಯವಾದುದರ ಸೋದರಿ —"

ಶಿಲ್ಪಿ ನಿಶ್ಯಕ್ತನಾಗುತ್ತ ಬಂದ. ರಕ್ತ ಅವನ ಸುತ್ತ ಕಾಲುವೆ ಯಂತೆ ಹರಿದು ನಿಂತಿತ್ತು. ಮೃತ್ಯುಕರೆ ಸ್ಪಷ್ಟವಾಗಿ ಕೇಳಬರುತ್ತಿತ್ತು.... ಒಮ್ಮೆಲೆ ಶಿಲ್ಪಿಯ ಮುಖದಲ್ಲಿ ಹರ್ಷಮೂಡಿತು.

" ಮೈನಾ ...." ಎಂದ

ಅವನ ಧ್ವನಿಯಲ್ಲಿ ಅಪಾರ ಸಂತೋಷ, ವಿಜಯ, ಅಂತಃಕರಣ ತುಂಬಿತ್ತು.

" ಮೈನಾ .... ನಾನು ಸೋಲಲಿಲ್ಲ. ಹಾಗೆ ನಾನು ತಿಳಿದದ್ದು ತಪ್ಪು."

" ಹೌದು ಪ್ರಭೂ ... ನಿಮಗೆ ಸೋಲಿಲ್ಲ."

" ಕೇಳು. ಸಂಪೂರ್ಣವಾದುದನ್ನು ಅರಸುತ್ತಾ ನಾವು ಊರೂರು ಅಲೆಯುತ್ತೇವೆ. ಅದು ಸದಾ ನಮ್ಮ ಬಳಿಯಲ್ಲಿಯೇ ಇರುತ್ತದೆ. ಸಾಮಾನ್ಯವಾದುದೇ ಪರಿಪೂರ್ಣ. ನಿಸರ್ಗ ತನ್ನ ಭಂಡಾರವನ್ನು ಸಾಮಾನ್ಯದಲ್ಲಿ ಔತಿಟ್ಟಿರುತ್ತದೆ. ನನ್ನ ಸರ್ವಾಂಗ ಸುಂದರಿ ಸಾಮಾನ್ಯ ಸ್ತ್ರೀಯಾದುದಕ್ಕೆ ಅದೇ ಕಾರಣ — ಅದೇ ನಿಸರ್ಗದ ಸಂದೇಶ — ಸಂದೇಶ .... ಸಂ .... ದೇ ... ಶ"

ಎನ್ನುತ್ತ ಅವನ ಉಸಿರು ಮೆತ್ತಗಾಯಿತು.

ಮೈನಾ ಅವನ ಕುತ್ತಿಗೆಯನ್ನು ಕೆಳಗಿಳುಹಿ ಶಿಲ್ಪದ ಅವಕುಂಠನ ತೆಗೆದು ಶಿಲ್ಪಿಗೆ ಹೊದೆಸಿದಳು. ಅವಳ ಕಣ್ಣು ಕೆಳಗೆ ಬಿದ್ದಿದ್ದ ಶಿಲ್ಪದ ಕಡೆಗೆಹೋಯಿತು.

ಅತ್ತ ಮುರಿದು ಬಿದ್ದಿದ್ದ ಶಿಲ್ಪಿ .... ಇತ್ತ ಮುರಿದು ಬಿದ್ದಿದ್ದ ಶಿಲ್ಪ .... ಇವುಗಳ ಮಧ್ಯೆ ಮುರಿದು ಬಿದ್ದಿದ್ದ ಹೆಣ್ಣು ಕುಳಿತಿತ್ತು. ಮಾತು ಹೊರಡದು — ಕಣ್ಣಲ್ಲಿ ನೀರಿಲ್ಲ .... ದೃಷ್ಟಿ ಎಲ್ಲಿಯೋ! .... ಮೈನಾ ಹಾಗೆ ಕುಳಿತವಳು ಮತ್ತೆ ಆ ಸ್ಥಳ ಬಿಟ್ಟು ಮೇಲಕ್ಕೇಳಲಿಲ್ಲ.



# ಒಂದು ಸಂಜೆ

ಸಂಜೆ ಏಕೋ ಭಾರವಾಗಿತ್ತು. ಬರಬೇಕಾದ ಮಳೆ ಬಂದಿರಲಿಲ್ಲ. ಮುಗ್ಗು ಶಕೆ. ಪ್ರಕೃತಿ ಜಡವಾಗಿತ್ತು, ಮನಸ್ಸು ಅವ್ಯಕ್ತ ನೋವಿನಲ್ಲಿ ಮುದುರಿಕೊಂಡಿತ್ತು.

ಹವಾಮಾನದ ಕಾರಣವಲ್ಲದೆ ದೇಶದ ಪರಿಸ್ಥಿತಿಯೂ ಈ ನೋವಿಗೆ ಕಾರಣವಾಗಿತ್ತು. ಅಲ್ಲಿ ಕೊಲೆ, ಇಲ್ಲಿ ಲೂಟಿ; ಅಲ್ಲಿ ಮನೆಗೆ ಬೆಂಕಿ ಇಟ್ಟರು—ಇಲ್ಲಿ ಸ್ತ್ರೀಯರ ಮೇಲೆ ಅತ್ಯಾಚಾರ ಮಾಡಿದರು! ದಿನ ಪತ್ರಿಕೆಯಲ್ಲಿ ಬರುತ್ತಿದ್ದ ಸುದ್ದಿ ಓದಿ ಓದಿ ಚೈತನ್ಯ ಉಡುಗಿ ಹೋದಂತಾಗಿತ್ತು. ದಿನಪತ್ರಿಕೆಯನ್ನು ಓದುವ ಹವ್ಯಾಸವನ್ನೇ ಬಿಟ್ಟು ಬಿಡುವ ಎಂದು ಯೋಚಿಸಿದೆ. ಕೆಲವು ದಿನ ಬಂದ ಪತ್ರಿಕೆಯನ್ನು ಕಣ್ಣೆತ್ತಿನೋಡುತ್ತಿರಲಿಲ್ಲ. ಎಷ್ಟುಹೊತ್ತು ನಿರ್ಧಾರ? ಅನಿರೀಕ್ಷಿತವಾಗಿ ಕೈ ಪತ್ರಿಕೆಯ ಕಡೆಗೆ ಹಾದುಹೋಗುತ್ತಿತ್ತು.

ಶಾಮು, ರಾಜ ಬಂದರೆ ಹೊರಗಾದರೂ ಹೋಗಿಬರುವ ಎಂದು ಯೋಚಿಸಿದೆ. ಹೊರಗೆ ಹೋಗುವುದಕ್ಕೂ ಭಯ! ಯಾರು ಬಂದು ಹಿಂದಿನಿಂದ ಬೆನ್ನಿಗೆ ಚೂರಿ ಹಾಕುವರೋ? ಮನುಷ್ಯನ ಬಾಳು ಕಸ

ಕಡ್ಡಿಗಿಂತ ಕಡೆಯಾಗಿತ್ತು. ಮನೆಯಲ್ಲಿ ಚೇಳು ಸಿಕ್ಕಿದರೆ ಹೊಡೆಯಲು ಹೇಸುತ್ತಿದ್ದವರು ನರಮೇಧಕ್ಕೆ ನಿಂತಿದ್ದರು. ಮನುಷ್ಯ ರಾಕ್ಷಸನಾಗಿದ್ದ.

ಬಟ್ಟೆಬರೆ ಹಾಕಿಕೊಂಡು ಶಾಮು, ರಾಜು ದಾರಿ ನೋಡುತ್ತ ನಿಂತೆ. ಮನೆಯಲ್ಲಿರಲು ಮನಸ್ಸು ನಿಲ್ಲಲೊಲ್ಲದು. ಹೊರಗೆ ಹೋಗಲೇ ಬೇಕಾದ ಕಾರಣವಿರಲಿಲ್ಲ. ಲಾಲ್‌ಬಾಗಿಗೆ ಹೋಗಿ ಕುಳಿತರೆ ಮನಸ್ಸಿಗೆ ಸ್ವಲ್ಪ ನೆಮ್ಮದಿಯಾಗಬಹುದೆಂದು ಕುರುಡು ಆಸೆ. ಶಾಂತಿ, ಅಶಾಂತಿ, ತೃಪ್ತಿ, ಅತೃಪ್ತಿಗಳನ್ನು ತನ್ನಲ್ಲಿಯೇ ಅಡಗಿಸಿಕೊಂಡ ಮಾನವ ಅದನ್ನರಿಯದೆ ಹೊರಗೆ ತೃಪ್ತಿ ಶಾಂತಿಗಳನ್ನು ಹುಡುಕುತ್ತಾನೆ.

ಶಾಮು, ರಾಜ ಬಂದೇ ಬಂದರು. ನನ್ನ 'ಭೀಮಾರಿ'ಯನ್ನು ಉಸಿರೆತ್ತದೆ ಸ್ವೀಕರಿಸಿದರು. ಮೂವರೂ ಲಾಲ್‌ಬಾಗಿನ ಕಡೆ ಹೊರಟೆವು.

ಆ ವೇಳೆಗಾಗಲೇ ನಸುಗತ್ತಲಾಗುತ್ತ ಬಂದಿತ್ತು. ತೋಟದಲ್ಲಿಯೂ ಸಾಕಷ್ಟು ಗಾಳಿಯ ಓಡಾಟವಿಲ್ಲ, ಎಲೆಗಳ ಮರ್ಮರ ಕೂಡ ನಿಂತು ಹೋಗಿತ್ತು. ಪ್ರಕೃತಿ ನೀರವ. ಶಖೆ ನಮ್ಮ ಕುತ್ತಿಗೆ ಹಿಸುಕುತ್ತಿತ್ತು.

ಹಸಿರು ಹಾಸಿನಮೇಲೆ ಕುಳಿತೆವು. ಮಳೆ ಬಂದು ಹುಲ್ಲು ಬೆಳೆದಾಗ ಅದು ಹಸಿರು ಹಾಸಾಗುತ್ತಿತ್ತು. ಅಲ್ಲಲ್ಲಿ ಕುಳಿತ ಜನ ಒಣಗಿದ ಹುಲ್ಲಿಗೆ ಕಡ್ಡಿಹೊತ್ತಿಸಿದ್ದರು.

ರಾಜು ಅಸಮಾಧಾನದಿಂದ

"ಜಿನ್ನಾ ಅವರು ತಮ್ಮ ಹಟವನ್ನೇ ಗೆದ್ದರು, ಪಾಕಿಸ್ಥಾನ ಅವರಿಗೆ ಸಾಧಿಸಿತು."

"ಕಾಂಗ್ರೆಸ್ಸಿನವರು ಅವರಿಗೆ ಪಾಕಿಸ್ಥಾನವನ್ನು ಕೈಯೆತ್ತಿ ಕೊಟ್ಟಹಾಗಾಯಿತು. ಕಾಂಗ್ರೆಸ್ಸಿನ ದೌರ್ಬಲ್ಯವೇ ಇದರ ಕಾರಣ."

"ಹೋಗಲಿ ಬಿಡಿ. ಜತೆಯಲ್ಲಿದ್ದು ನಿತ್ಯ ಜಗಳ ಕಾಯುವುದಕ್ಕಿಂತ ದೂರವಿದ್ದು ವಿಶ್ವಾಸ ಬೆಳೆಸುವುದು ಲೇಸು" ಎಂದು ನಾನು ಹೇಳಿದೆ.

"ವಿಶ್ವಾಸ ಎಲ್ಲಿಂದ ಬೆಳೆಯಬೇಕು ? ಇನ್ನು ಪಾಕಿಸ್ಥಾನಕ್ಕೂ ಹಿಂದೂಸ್ಥಾನಕ್ಕೂ ಹತ್ತಿದ ಜಗಳ ಹರಿಯುವುದಿಲ್ಲ."

"ಹಾಗಲ್ಲ ರಾಜು, ಲೀಗಿನವರು ಅಧಿಕಾರಸ್ಥಾನಕ್ಕೆ ಬಂದರೆ ತಮ್ಮ ಧೋರಣೆಯನ್ನು ತಾವೇ ಬದಲಾಯಿಸುತ್ತಾರೆ. ಜವಾಬ್ದಾರಿ ಹೆಗಲುಹತ್ತಿದಮೇಲೆ ಪಟಾಟೋಪ ಪ್ರಯೋಜನಕ್ಕೆ ಬರುವುದಿಲ್ಲ."

"ಕೊನೆಗೂ ಬ್ರಿಟಿಷರು ಹಿಂದೂಸ್ಥಾನವನ್ನು ಹೋಳು ಹೋಳು ಮಾಡಿಯೇ ಬಿಟ್ಟರು" ಎಂದ ಶಾಮು.

"ಅವರನ್ನೇಕೆ ಆಕ್ಷೇಪಿಸಬೇಕು. ಹಿಂದೆ ಕರ್ಜನ್ ಬಂಗಾಳವನ್ನು ವಿಭಜಿಸಿದಾಗ ಅದನ್ನು ನಮ್ಮವರು ತಡೆಗಟ್ಟಲಿಲ್ಲವೇ? ನಮ್ಮ ಜನಕ್ಕೆ ವಿವೇಕವಿಲ್ಲದಿರುವಾಗ ಇತರರನ್ನು ಆಕ್ಷೇಪಿಸಿ ಏನು ಫಲ?"

"ಅದೂ ನಿಜವೇ — ಆದರೆ ಬ್ರಿಟಿಷರು ಹೆಚ್ಚು ಔದಾರ್ಯ ತೋರಿಸಬಹುದಾಗಿತ್ತು."

"ಅವರೇನು ನಮ್ಮ ಚಿಕ್ಕಪ್ಪನ ಮಕ್ಕಳೇ? ಹಿಂದೂಸ್ಥಾನ ಒಂದಾದರೆ ಅವರ ಬೇಳೆ ಎಲ್ಲಿ ಬೇಯಬೇಕು?"

"ಪಾಕಿಸ್ಥಾನದಲ್ಲಿ" ಎಂದು ರಾಜು ಸೇರಿಸಿದ.

ಇಷ್ಟುಹೊತ್ತಿಗೆ ಸಾಕಷ್ಟು ಕತ್ತಲೆ ಕವಿದಿತ್ತು. ತೋಟದಲ್ಲಿ ಮುಸಮುಸಕಾಗಿದ್ದ ಮಬ್ಬು ಬೆಳಕಿನಲ್ಲಿ ಬರುವವರ ಮುಖ ಸ್ಪಷ್ಟವಾಗಿ ಕಾಣುತ್ತಿರಲಿಲ್ಲ.

ಯಾರೋ 'ಹೆಲ್ಪ್-ಹೆಲ್ಪ್' ಎಂದು ಕೂಗಿದಂತಾಯಿತು. ಶಾಮು ಎದ್ದ. ರಾಜು ಅವನ ಕೋಟು ಹಿಡಿದೆಳೆದು 'ಅವಿವೇಕಿ ಕೂಡು' ಎಂದ.

"ಯಾರೋ ಹೆಲ್ಪ್ ಎಂದು ಕೂಗುತ್ತಿದ್ದಾರೆ, ನೋಡಿ ಬರುತ್ತೇನೆ."

"ಚೂರಿ ಹಾಕಿಸಿಕೊಳ್ಳುವುದಕ್ಕೆ ಅಷ್ಟು ಆಸೆಯೇ?" ಮತ್ತೆ 'ಬನ್ನಿ ಸಾರ್— ಬೇಗ ಬನ್ನಿ' ಎಂದು ಕೂಗಿದ ಹಾಗಾಯಿತು. ಶಾಮು ಕೋಟು ಬಿಡಿಸಿಕೊಂಡು ಅತ್ತ ಓಡಿದ. ನಾನೂ ರಾಜು ಅವನನ್ನು ಹಿಂಬಾಲಿಸಿದೆವು.

ನಾವು ಕೂತಿದ್ದೆಡೆಯ ಎದುರಿಗೆ ಲಾಲಾಬಾಗ್ ಕೆರೆ. ಕೆರೆ

ಏರಿಯ ಮೇಲೆ ಒಬ್ಬನನ್ನು ಬಲವಾಗಿ ಹಿಡಿದುಕೊಂಡು ಇಬ್ಬರು ಜಬರಿಸುತ್ತಿದ್ದರು. ಆತ ಗಡಗಡ ನಡಗುತ್ತಿದ್ದ.

ಮುಖನೋಡಿದರೆ ಚೂರಿಹಾಕುವ ಪ್ರಾಣಿ ಹಾಗೆ ಕಾಣುತ್ತಿರಲಿಲ್ಲ. ಶುಭ್ರವಾದ ಷರಟು ಹಾಕಿದ್ದಾನೆ, ದಟ್ಟಿಪಂಚೆ ಉಟ್ಟಿದ್ದಾನೆ.— ಮುಖದಲ್ಲಿ ಬೆವರು ಧಾರಾಕಾರವಾಗಿ ಇಳಿಯುತ್ತಿದೆ.

"ಏನ್ರೀ ಗಲಾಟೆ ?"

"ನೋಡಿ ಸಾರ್....ಇವರು...." ಆತನ ಬಾಯಿಂದ ಮಾತು ಹೊರಡಲಿಲ್ಲ.

ಉಳಿದ ಇಬ್ಬರನ್ನು ನೋಡಿ—

"ಏನ್ರೀ ಇದು ?"

"ನೋಡಿ ಸಾರ್...ಈತ..."

"ಅವರ ಕೈ ಬಿಡಿ."

"ಕೇಳಿ ಸಾರ್....ನಾವು ಗೇಟಿನಲ್ಲಿ ಬರುವಾಗಲೇ ಈತ 'ಇಲ್ಲಿ ಭಾವಿ ಇದೆಯೇ ?' ಎಂದು ಕೇಳಿದ. ನಾವು ಇಲ್ಲವೆಂದೆವು. 'ಕೆರೆ ಇದೆಯೇ ?' ಎಂದು ಕೇಳಿದ. 'ಅಗೋ ಅಲ್ಲಿದೆ' ಎಂದು ತೋರಿಸಿದೆವು. ಈತ ದಡ ದಡ ಎಂದು ಕೆರೆಯ ಹತ್ತಿರ ಹೋದ. ನಾವು ಈತನನ್ನೇ ಹಿಂಬಾಲಿಸಿದೆವು."

"ನಾನು ಆತ್ಮಹತ್ಯ ಮಾಡಿಕೊಳ್ಳುವೆನೆಂದು ಇವರು ಭಾವಿಸಿದರು ಸಾರ್."

"ಅಲ್ಲದಿದ್ದರೆ ಕೆರೆ, ಭಾವಿ ಏಕೆ ಕೇಳಿದಿರಿ ?"

"ನನ್ನ ಸಹಾಯಕ್ಕೆ ಬಂದುದಕ್ಕೆ ಇವರಿಗೆ ನಾನು ತುಂಬ ಕೃತಜ್ಞ. ಆದರೆ ಸುಮ್ಮನೆ ಗಲಾಟೆ ಎಬ್ಬಿಸಿ ನನ್ನ ಮಾನ ಕಳೆಯುತ್ತಿದ್ದಾರೆ. ಮೊದಲು ಇವರ ಕೈ ಬಿಡಿಸಿ ಸಾರ್."

ಇಬ್ಬರೂ ಆತನ ಕೈಬಿಟ್ಟರು.

"ನಾನು ಕಾಹಿಲೆ ಮನುಷ್ಯ ಸಾರ್. ಈ ಊರಿನವನಲ್ಲ. ನನ್ನೂರು ಸೇಲಂ. ಇಲ್ಲಿಗೆ ಚಿಕಿತ್ಸೆಗಾಗಿ ಬಂದೆ. ನರ ದೌರ್ಬಲ್ಯ."

"ಚಿಕಿತ್ಸೆಗೆ ಬಂದವರು ಕೆರೆ ಭಾವಿ ಏತಕ್ಕೆ ಹುಡುಕುತ್ತಿದ್ದಿರಿ ?"

“ಕೇಳಿ ಸಾರ್ ಯಾರೋ ಮಂತ್ರಿಸಿ ಒಂದು ತೆಂಗಿನಕಾಯಿ, ನಿಂಬೆಹಣ್ಣು ಕೊಟ್ಟಿದ್ದಾರೆ. ಅದನ್ನು ಸಂಜೆಯಾದಮೇಲೆ ಕೆರೆಗೋ ಭಾವಿಗೋ ಹಾಕಬೇಕು ಎಂದು ಹೇಳಿದರು. ಅದಕ್ಕೋಸ್ಕರ ಇಲ್ಲಿಗೆ ಬಂದೆ ಇವರು ದಾರಿಯಲ್ಲಿ ಸಿಕ್ಕಿದರು. ಇಲ್ಲಿ ಬಾವಿ—ಕೆರೆ ಇದೆಯೇ? ಎಂದು ಕೇಳಿದೆ.”

ಎಂದು ಹೇಳುತ್ತಾ ತನ್ನ ಕೈಯಲ್ಲಿದ್ದ ಗಂಟನ್ನು ಬಿಚ್ಚಿ ತೆಂಗಿನ ಕಾಯಿ, ನಿಂಬೆಹಣ್ಣು ತೆಗೆದು ಕೆರೆಗೆಸೆದ.

ನನಗೆ ಹಿಡಿಸಲಾರದಷ್ಟು ನಗೆ ಬಂತು. ಆತನ ಸಹಾಯಕರು—

“ನಮ್ಮದು ತಪ್ಪಾಯಿತು ಸಾರ್. ಕ್ಷಮಿಸಿ” ಎಂದು ಹೇಳಿ ಹೊರಟರು.

ಆತನೂ ಹೊರಟ.

ಶಾಮು ರಾಜುವನ್ನು ನೋಡಿ

“ಯಾರೂ ಚೂರಿ ಹಾಕಲೇ ಇಲ್ಲವಲ್ಲಯ್ಯ” ಎಂದ.

“ನೀನು ಹೀಗೆ ನಗುತ್ತಿರು — ಚೂರಿ ಬೀಳತ್ತೋ ಇಲ್ಲವೋ ನೋಡಬೇಕಂತೆ” ಎಂದ.

ಮೂವರೂ ಮಾತನಾಡಿಕೊಂಡು ಮನೆಯ ಕಡೆ ಧಾವಿಸಿದೆವು. ಜೀವನದ ಕಾರ್ಮೋಡದ ಮೇಲೆ ಈ ದೃಶ್ಯ ಬೆಳ್ಳಿಯ ಬೆಳಕಿನಂತೆ ಮಿಂಚಿತು. ಮಾನವನ ಬದುಕಿಗೆ, ಬಾಳಿಗೆ ಬೆಲೆ ಕೊಡುವವರೂ ಇದ್ದಾರೆ ಎಂದುಕೊಂಡೆ.



# ಬೀದಿಯ ಹೆಣ್ಣು

ಅವನ ನಡತೆ ಯಾರೂ ಒಪ್ಪುವಂತಿರಲಿಲ್ಲ.

ಅವನೇ ಒಪ್ಪುವಂತಿರಲಿಲ್ಲ.

ಜೀವನದಲ್ಲಿ ಏನೋ ಕೊರತೆ ತಲೆದೋರಿ ಅದು ಮೊಟಕಾಗುತ್ತದೆ. ಬಾಳು ಭಾರವಾಗುತ್ತದೆ. 'ಹಲ್ಲಿದ್ದವರಿಗೆ ಕಡಲೆಯಿಲ್ಲ' ಎನ್ನುವಂತೆ. ಅವನಿಗೆ ಹಲ್ಲೂ ಇತ್ತು ಕಡಲೆಯೂ ಇತ್ತು. ಕೂತು ತಿಂದು, ನಾಲ್ಕು ಜನಕ್ಕೆ ಹಾಕಿದರೂ ಸವೆಯದಂಥ ಆಸ್ತಿ. ವಾಸಕ್ಕೆ ದಿವ್ಯವಾದ ಬಂಗಲೆ. ತಿರುಗಾಡುವುದಕ್ಕೆ ಪೆಕಾರ್ಡ್ ಕಾರ್.

ಮನೆಯಲ್ಲಿ ಲಕ್ಷ್ಮಿಯಂಥ ಹೆಂಡತಿ. ಚಿನ್ನದ ಗೊಂಬೆಗಳ ಹಾಗಿದ್ದ ಎರಡು ಮಕ್ಕಳು — ಒಂದು ಗಂಡು, ಒಂದು ಹೆಣ್ಣು.

ಅವನು ಸ್ವಭಾವತಃ ದುಷ್ಟನಲ್ಲ. ಒಂದು ಚಕ್ಕಿನ ಪಿಳ್ಳೆಯ ನೋವನ್ನೂ ಸಹಿಸಲಾಗದಂಥ ಕರುಣಾರ್ದ್ರಚಿತ್ತ. ಇತಿಮಿತಿಯನ್ನು ಕಾಣದ ದಾನಿ. ಅವನ ಬಳಿಗೆ ಬಂದು 'ದೇಹೀ' ಎಂದವರು ಬರಿಗೈಯಲ್ಲಿ ಹೋದುದೇ ಇಲ್ಲ. ದುಡ್ಡು ಕೊಳೆಯುತ್ತಿದೆಯೆಂದು ಬಿಸಾಡುವ ಸ್ವಭಾವದವನಲ್ಲ. ಅವನ ಕೊಡುಗೈಯಲ್ಲಿ ರಾಜಕಳೆಯಿತ್ತು.

ಸನ್ಯಾಸಿಯ ತ್ಯಾಗವಿತ್ತು; ತಾಯಿಯ ನಿರ್ಮಲ ಮಮತೆಯಿತ್ತು. ಪ್ರತ್ಯಾಶೆಯಿಲ್ಲದೆ ಕೈಯೆತ್ತಿ ಕೊಡುತ್ತಿದ್ದ./

ಅವನ ಪಾಂಡಿತ್ಯಕ್ಕೆ ನಾವು ಬೆರಗಾಗಿದ್ದುದು ಹೆಚ್ಚಲ್ಲ. ತಿಳಿದ ಮಹಾ ಘಟಾನುಘಟಿಕರು ತಲೆದೂಗಿದ್ದರು. ಷೇಕ್ಸ್‌ಪಿಯರ್, ಕಾಳಿದಾಸ ಕರತಲಾಮಲಕ. ಐನ್‌ಸ್ಟೀನನ ತತ್ತ್ವವನ್ನು ಮಕ್ಕಳಿಗೂ ತಿಳಿಯುವಂತೆ ವಿವರಿಸಬಲ್ಲ ಜಾಣ್ಮೆ. ರಸಲ್, ವೈಟ್‌ಹೆಡ್, ಡೂಯಿ ತತ್ತ್ವಜ್ಞರ ಕ್ಲಿಷ್ಟ ವಿಚಾರಸರಣಿ ಅವನ ಪಾಲಿಗೆ ಹಾಲು ಸಕ್ಕರೆ. ಸಂಗೀತ, ಸಾಹಿತ್ಯಗಳೆರಡರಲ್ಲಿಯೂ ಪಾರಂಗತ.

ಇಂಥವನು ಸಮಾಜದ ಕಣ್ಣಿಗೆ ಅಸ್ಪೃಶ್ಯನಾಗಿದ್ದ. ಅವನನ್ನು ಹಲವು ದೃಷ್ಟಿಯಲ್ಲಿ ಗೌರವಿಸುತ್ತಿದ್ದವರು ನಿಂದಿಸತೊಡಗಿದ್ದರು. ಅವನ ಗೆಳೆಯರು ಅವನಿಂದ ದೂರವಾಗಿದ್ದರು. ಕೈಹಿಡಿದ ಹೆಂಡತಿ ಅವನ ಮೇಲೆ ಕೆಂಡ ಕಾರುತ್ತಿದ್ದಳು. ಮಕ್ಕಳೆಂದರೆ ಪ್ರಾಣಬಿಡುತ್ತಿದ್ದವನು ತನ್ನ ಮಕ್ಕಳನ್ನು ಮಾತನಾಡಿಸಲು ಹೆಂಡತಿಯ 'ಅಪ್ಪಣೆ' ಪಡೆಯಬೇಕಾಗಿತ್ತು.

ನಿಜವಾಗಿ ಅವನ ಮೇಲೆ ಪ್ರಪಂಚ ಕುಸಿದು ಬಿದ್ದಿತ್ತು.

ಅವನ ಹಿತೈಷಿಗಳೆನ್ನುವವರೇ ಇರಲಿಲ್ಲ.

ಆದರೆ ಅವನೆದುರು ನಿಲ್ಲುವ ಯೋಗ್ಯತೆ, ಧೈರ್ಯ ಯಾರಿಗೂ ಇರಲಿಲ್ಲ. ಅವನೊಂದಿಗೆ ವಾದಮಾಡಿ ಒಪ್ಪಿಸುತ್ತೇವೆಂದು ಹೋದ ಹಿರಿಯರು ಮಣ್ಣುಮುಕ್ಕಿದ್ದರು. ಎಲ್ಲರ ಅಸಹನೆಗೆ ಈ ಪರಾಜಯ ಪುಟವಿಕ್ಕಿತ್ತು. ಯಾರೂ ಅವನನ್ನು ಮಣಿಸಲಾಗಲಿಲ್ಲ.

ಅವನ ಬಾಳಿಗಾದರೂ ಸುಖವಿತ್ತೇ? ಅದನ್ನು ಯಾರು ಹೇಳಬೇಕು? ಸುಖವಿಲ್ಲದಿದ್ದರೆ ಅವನು ಬಲಿದಾನಕ್ಕೆ ಸಿದ್ಧನಾಗುತ್ತಿದ್ದನೇ? ಇಂಥ ಪ್ರಚಂಡ ಪ್ರತಿರೋಧವನ್ನು ಸಹಿಸುತ್ತಿದ್ದನೇ?

೨

ಚಂದ್ರನನ್ನು ಅವನ ತಂದೆ ಲಾಲ್‌ಬಾಗಿನ ಹೂಗಿಡದಂತೆ ಬೆಳಸಿದರು. ಸಂಸ್ಕೃತಕ್ಕೆ ಮೇಷ್ಟ್ರು, ಇಂಗ್ಲೀಷಿಗೆ ಮೇಷ್ಟ್ರು, ಸಂಗೀತಕ್ಕೆ ಮೇಷ್ಟ್ರು. ಅವನ ಬಾಯಿಂದ ಬಂದುದೇ ಅವರಿಗೆ ವೇದವಾಕ್ಯ.

ಕೊರತೆಯೆನ್ನುವ ಶಬ್ದ ಅವನ ಕಿವಿಯಮೇಲೆ ಬಿದ್ದೇ ಇರಲಿಲ್ಲ. ಆದರೆ ತಂದೆ ಅವನ ಎಡಬಿಡುತ್ತಿರಲಿಲ್ಲ. ಎಲ್ಲಿಗೆ ಹೋಗಬೇಕಾದರೂ ಜತೆಯಲ್ಲಿ ತಾವಿರಬೇಕು. ಗೆಳೆಯರು ಚಂದ್ರನನ್ನು ನೋಡಬಂದಾಗಲೂ ತಂದೆ ಎದುರಿಗೆ ಕುಳಿತುಕೊಳ್ಳುತ್ತಿದ್ದರು. ಚಂದ್ರನಿಗೆ ಸೌಖ್ಯದ ಸಾಮಗ್ರಿಗಳು ಹೇರಳವಾಗಿದ್ದವು. ಆದರೆ ಅದನ್ನನುಭವಿಸುವ ಸ್ವಾತಂತ್ರ್ಯವಿರಲಿಲ್ಲ. ಚಂದ್ರ ಕಾಲೇಜ್ ಮುಗಿಸಲು ತಂದೆ ಒಳ್ಳೆಯ ಕಡೆ ಹೆಣ್ಣು ನೋಡಿ ಅವನ ಲಗ್ನಮಾಡಿದರು. ಜಾನಕಿ ಸೇರುವ ಮನೆಗೆ ಬರಿಗೈಯಲ್ಲಿ ಹೋಗಬಾರದೆಂದು ಒಂದು ಲಕ್ಷ ರೂಪಾಯಿ ಬಳುವಳಿ ತಂದಿದ್ದಳು. ಲಕ್ಷ್ಮಿ ಲಕ್ಷ್ಮಿಯನ್ನು ಸೇರಿದಂತಾಗಿತ್ತು.

ಜಾನಕಿಯನ್ನು ರೂಪವತಿಯೆಂದರೆ ಸಾಲದು. ಬ್ರಹ್ಮ ತನ್ನ ರೂಪಕಲೆಯನ್ನು ಅವಳಲ್ಲಿ ಮುಗಿಸಿದ್ದ ಎಂದು ಧಾರಾಳವಾಗಿ ಹೇಳಬಹುದಾಗಿತ್ತು. ಗಂಭೀರವಾದ ಎತ್ತರ, ತುಂಬಿದ ಮೈಕಟ್ಟು, ಬೆಳದಿಂಗಳಿನ ಮೈಬಣ್ಣ. ಪ್ರೇಮ, ಯೌವನಗಳ ದಿಗ್ವಿಜಯವನ್ನು ಸಾರುತ್ತಿದ್ದ ಸ್ತನದ್ವಯ. ಎದೆಯ ಸಮತೋಲನವನ್ನು ಕಾಪಾಡುತ್ತಿದ್ದ ನಿತಂಬ. ನಗೆಲಾಸ್ಯದ ವೇದಿಕೆಯಂತಿದ್ದ ಮುಖಮಂಡಲ. ಪ್ರಮಾಣಬದ್ಧವಾದ ನಾಸಿಕ, ನಯನಗಳು.

ಜಾನಕಿ ಕಪ್ಪುರೇಷ್ಮೆ ಶೀರೆ ಉಟ್ಟು, ಉಡಿತುಂಬುವ ತನ್ನ ರತ್ನಖಚಿತ ಉಡ್ಯಾಣ ಧರಿಸಿ ಒಮ್ಮೆ ಚಂದ್ರನ ಮುಂದೆ ನಿಂತಾಗ ಅವಳನ್ನು ಬಿಗಿದಪ್ಪಿ 'ನೀನೊಬ್ಬ ರಾಜಪೂತ ರಾಣಿ' ಎಂದು ಪೂಜಿಸಿದ್ದ.

ಅವಳ ಮುಗ್ಧಮೋಹಕ ಸೌಂದರ್ಯಕ್ಕೆ ಚಂದ್ರ ಮಾರುವೋಗಿದ್ದ. ಅವಳ ಸಂಗದಲ್ಲಿದ್ದ ಪ್ರತಿಯೊಂದು ಕ್ಷಣವೂ ಅವನ ಪಾಲಿಗೆ ಸ್ವರ್ಗತುಲ್ಯವಾಗಿದ್ದವು.

'ಕೆಲವರಿಗೆ ಕೆಲವು ತಿಂಗಳು ಮಧುಚಂದ್ರ. ನನಗೆ ಇಡೀ ಬಾಳೇ ಮಧುಚಂದ್ರ' ಎಂದು ಚಂದ್ರ ಆಪ್ತಗೆಳೆಯರಲ್ಲಿ ಹೇಳಿಕೊಂಡು ಇದ್ದ.

ಇಂಥ ಮಧುರಮೈತ್ರಿಯ ಮುಗುಳುಗಳೇ ಪ್ರಕಾಶ ಮತ್ತು ಉಷಾ. ಮಕ್ಕಳಿಗೆ ಆ ಹೆಸರುಗಳನ್ನು ಹುಡುಕಿ ಇಟ್ಟವನೂ ಅವನೇ.

ತಂದೆ ತೀರಿಕೊಂಡರು. ಮನೆಯ ಯಜಮಾನಿಕೆ ಚಂದ್ರನ ಕೈಗೆ ಬಂತು. ಗೆಳೆಯರ ಆಗಮನ ನಿರ್ಗಮನಕ್ಕೆ ಈಗ ಯಾವ ತಡೆಯೂ ಇರಲಿಲ್ಲ. ಅವರ ಮಾತುಕತೆ ಕೇಳುವುದಕ್ಕೆ ತಂದೆ ಎದುರಿಗೆ ಕುಳಿತುಕೊಳ್ಳುವ ಹಾಗಿರಲಿಲ್ಲ. ಚಂದ್ರ ತನಗೆ ಒಮ್ಮೆಲೇ ದೊರೆತ ಸ್ವಾತಂತ್ರ್ಯದ ಪ್ರಕಾಶಕ್ಕೆ ತುಸು ಚಕಿತನಾದ. ಆದರೆ ಕ್ರಮಕ್ರಮೇಣ ಸ್ವಾತಂತ್ರ್ಯ ರಕ್ತಕ್ಕಂಟುತ್ತ ಬಂತು. ಅದರ ಉನ್ಮಾದದಲ್ಲಿ ತನ್ನ ಪರತಂತ್ರ ದೆಸೆಯನ್ನವನು ಮರೆಯುತ್ತ ಬಂದ. ಗೆಳೆಯರು ಮರಸುತ್ತ ಬಂದರು.

ಸ್ವಾತಂತ್ರ್ಯ, ಸ್ವಚ್ಛಂದ ಒಂದೇ ನಾಣ್ಯದ ಎರಡು ಮುಖಗಳು. ಒಂದು ಬಾಳನ್ನು ಮೇಲಕ್ಕೆತ್ತುತ್ತದೆ; ಇನ್ನೊಂದು ಬಾಳನ್ನು ಅಧೋ ಗತಿಗೆ ಇಳಿಸುತ್ತದೆ. ಒಂದು ಬಾಳಮುಗುಳನ್ನು ಅರಳಿಸುತ್ತದೆ, ಇನ್ನೊಂದು ಅರಳಿದ ಹೂವನ್ನು ನಲುಗಿಸುತ್ತದೆ. ಚಂದ್ರ ಎರಡರ ಅನುಭವವನ್ನೂ ಪಡೆದಿದ್ದ.

ಜಾನಕಿಯನ್ನು ಕೂಡಿಸಿಕೊಂಡು ಅವಳಿಗೆ ಆಗಾಗ್ಗೆ ಕಾಳಿದಾಸನ ಮೇಘಸಂದೇಶ ಕಾವ್ಯ, ಶಾಕುಂತಲ ನಾಟಕಗಳಿಂದ ರಸವತ್ತಾದ ಭಾಗಗಳನ್ನು ಓದಿ ಅರ್ಥ ವಿವರಿಸುತ್ತಿದ್ದ. ಕಾವ್ಯಾನಂದದ ನಿರ್ಮಲ ಸರಸ್ಸಿನಲ್ಲಿ ದಂಪತಿಗಳು ರಾಜಹಂಸಗಳಂತೆ ವಿಹರಿಸುತ್ತಿದ್ದರು.

ಚಂದ್ರ, ಜಾನಕಿ ಕಾರಿನಲ್ಲಿ ಕೂತು ವಾಯುಸೇವನೆಗೋ, ಸಿನಿಮಾಕ್ಕೋ ಹೋಗುವುದನ್ನು ಜನ ಕಣ್ದೆರೆದು ನೋಡಿ ಸಂತೋಷಿ ಸುತ್ತಿದ್ದರು. ಅವರ ತುಂಬಿದ ಬಾಳು ಸುತ್ತಮುತ್ತಲಿನವರ ಬಾಳಿಗೂ ಕ್ರತುಶಕ್ತಿಯನ್ನು ನೀಡಿತ್ತು.

ಚಂದ್ರನಿಗೆ ಜಾನಕಿಯನ್ನು ಕಂಡರೆ ಪೂರ್ಣ ಪ್ರೇಮವಿದ್ದುದು ಮಾತ್ರವಲ್ಲ, ಅಷ್ಟೇ ಗೌರವವೂ ಇತ್ತು. ಆಕೆಯೂ ಕಲಿತವಳು. ಕಾವ್ಯ, ಗಾಯನಗಳ ಆರಾಧಕಳು. ಶ್ರೀಮಂತ ಮನೆಯಲ್ಲಿ ಹುಟ್ಟಿ ಬೆಳೆದು, ಶ್ರೀಮಂತ ಮನೆಯನ್ನು ಸೇರಿದ್ದರೂ ನಿಗರ್ವ ಶಿರೋಮಣಿ. ತುಂಬಿದ ಬಾಳು ಅನಿರೀಕ್ಷಿತವಾಗಿ ಕೊಡುವ ವೈರಾಗ್ಯಭಾವ ಅವಳ ಬಾಳ್ವೆಗೊಂದು ಶುಚಿತ್ವ, ಶೋಭೆಯನ್ನಿತ್ತಿದ್ದವು.

ಅಕಳಂಕವಾದ, ನಿಷ್ಕಲ್ಮಷವಾದ ಅವರ ಬಾಳ್ವೆಯಾಗಸದಲ್ಲಿ ಒಂದು ಕಪ್ಪು ಮೋಡ ಕಾಣಿಸಿಕೊಂಡಿತು.

೩

ಮನೆಯನ್ನು ಬಿಟ್ಟು ಹೊರಡಲು ಸಂಕೋಚಪಡುತ್ತಿದ್ದ ಚಂದ್ರ ಕ್ರಮಕ್ರಮೇಣ ಮನೆಯಿಂದ ದೂರವಾಗಿರುವುದನ್ನು ಅಭ್ಯಾಸಮಾಡಿಕೊಂಡ. ಮೊದಮೊದಲು ಬೆಳಿಗ್ಗೆ ಎಲ್ಲೇ ಇದ್ದರೂ, ರಾತ್ರಿ ಮನೆ ಸೇರುತ್ತಿದ್ದ. ಅನಂತರ ಒಂದೊಂದು ರಾತ್ರಿಯೂ ಹೊರಗೇ ಕಳೆಯ ತೊಡಗಿದ. ಜಾನಕಿ ಕೇಳಿದರೆ ನಕ್ಕು ಅವಳ ಗಲ್ಲ ಸೇವರಿಸಿ, ಹಾಲುಗೆನ್ನೆಗೆ ಮುದ್ದಿಟ್ಟು ಕ್ಲಬ್ಬಿನ ನೆವ ಹೇಳಿಬಿಡುತ್ತಿದ್ದ. ಅವನು ಹೇಳುತ್ತಿದ್ದ ಸುಳ್ಳಿನಲ್ಲಿ ಅವನಿಗೇ ನಂಬಿಕೆಯಿರಲಿಲ್ಲ; ಆದರೆ ಜಾನಕಿ ಅದನ್ನು ಅಕ್ಷರಶಃ ನಂಬುತ್ತಿದ್ದಳು.

ದಿನಗಳೆದಂತೆ ಸುಳ್ಳು ತೀರ ತೆಳುವಾಗುತ್ತ ಬಂತು. ಜಾನಕಿಯ ಕಿವಿಯಮೇಲೆ ಒಡಕು ಸುದ್ದಿಗಳು ಬೀಳಲಾರಂಭಿಸಿದವು. ಅವಳು ಪ್ರಶ್ನೆಯನ್ನು ಒದ್ದೆಗಣ್ಣಿನಲ್ಲಿ ಕೇಳತೊಡಗಿದಳು. ಚಂದ್ರ ಅದೇ ಉತ್ತರವನ್ನು ಗಟ್ಟಿಯಾಗಿ ಹೇಳಿ ಪಾರಾಗುತ್ತಿದ್ದ.

ಒಮ್ಮೆ ಜಾನಕಿಗೆ ಗಂಡನ ಮುಖದರ್ಶನವಾಗಿ ಮೂರು ದಿವಸಗಳಾಗಿದ್ದವು. ಅವನು ಮನೆಗೆ ಬಂದವನೇ ಬಟ್ಟೆ ಬದಲಾಯಿಸಿ ಮತ್ತೆ ಹೊರಡಲುದ್ಯುಕ್ತನಾದ. ಜಾನಕಿ ಅವನ ಬಳಿ ಸಾರಿ

"ಮತ್ತೆ ಹೊರಗೆ ಹೋಗಬೇಕೇ?" ಎಂದಳು.

"ಹೂ"

"ನಾವು ಸಿನೀಮಾಕ್ಕೆ ಹೋಗಿ ಎಷ್ಟು ದಿವಸವಾಯಿತು?"

"ಆಯಿತು."

"ಗ್ಲೋಬ್‌ನಲ್ಲಿ ಒಳ್ಳೆಯ ಚಿತ್ರವಿದೆಯಂತೆ!"

"ಹೌದು, ಕಂಟೋನ್ಮೆಂಟಿನಲ್ಲಿ ಯಾವಾಗಲೂ ಒಂದು ಒಳ್ಳೇ ಚಿತ್ರವಿದ್ದೇ ಇರುತ್ತೆ."

"ಇವತ್ತು ಹೋಗೋಣ."

"ನನಗೆ ಪುರಸತ್ತಿಲ್ಲ. ನೀನು ಹೋಗಿ ಬಾ."

" ನಾನು ಹೋಗುವುದಕ್ಕಲ್ಲ ಹೇಳಿದ್ದು."

" ಇನ್ನು ಏತಕ್ಕೆ ?"

" ನಿಮ್ಮ ಜತೆ ಹೋಗೋಣವೆಂದು."

" ನನಗೆ ಪುರಸತ್ತಿಲ್ಲ ಎಂದು ಹೇಳಲಿಲ್ಲವೇ ?"

" ಹೇಳಿದಿರಿ."

" ಹಾಗಾದರೆ ?"

" ಏನು ಅಷ್ಟು ಕೆಲಸ ?"

" ಎಲ್ಲಾ ನಿನಗೆ ವರದಿ ಒಪ್ಪಿಸಬೇಕೇ ?"

" ಒಪ್ಪಿಸುತ್ತಿದ್ದಿರಿ."

" ಸರಿ. ಏನೂ ಕೆಲಸಕಾರ್ಯ ಮಾಡದೆ ನಾನು ಎಷ್ಟು ದಿವಸ ಸುಮ್ಮನೆ ಕುಳಿತಿರಲಿ."

" ಏನು ಕೆಲಸ ಅದನ್ನಾದರೂ ಹೇಳಬಾರದೇ ?"

" ಕೆಲಸ ಪೂರ್ತಿಯಾಗುವವರೆಗೂ ನಾನು ಯಾರಲ್ಲಿಯೂ ಹೇಳುವುದಿಲ್ಲ."

" ನನ್ನಲ್ಲಿಯೂ."

" ನಿನ್ನಲ್ಲಿಯೂ."

ಕಣ್ಣೀರು ಕೋಡಿಯಾಗಿ ಹರಿಯಿತು.

" ನಾನು ನಿಮಗೆ ಬೇಡವೇ ?"

ಎರಡು ಮಾತಿನಲ್ಲಿ ಜಾನಕಿ ಹೆಣ್ಣಿನ ಅಸಹಾಯಕತೆ, ಅಸಹನೀಯ ಯಾತನೆಯನ್ನು ತುಂಬಿ ಬಹಳ ಕಷ್ಟದಿಂದ ಉಚ್ಚರಿಸಿದಳು

ಚಂದ್ರ ವಿಚಾರಪರವಶನಾದ. ಅವಳ ಸರಳ ಪ್ರಶ್ನೆಗೆ ಉತ್ತರ ಕೊಡುವ ಸಾರಳ್ಯ ಅವನಲ್ಲಿ ಉಳಿದಿರಲಿಲ್ಲ.

" ಇವತ್ತು ಕ್ಷಮಿಸು ಜಾನಾ—ನಾಳೆ ಖಂಡಿತ ಸಿನೀಮಾಗೆ ಹೋಗೋಣ."

ಎಂದು ಹೇಳಿ ಅಲ್ಲಿ ನಿಲ್ಲದೆ ಹೊರಟುಬಿಟ್ಟ. ಆ 'ನಾಳೆ' ಬರಲೇ ಇಲ್ಲ. ಅದೇ ಸಿನೀಮಾಕ್ಕೆ ಚಂದ್ರ ಹೋಗಿಬಂದ....ಜಾನಕಿಯ ಜತೆಯಲ್ಲಲ್ಲ.

ಮೂರನೆಯ ದಿವಸ ಅವನು ಹಿಂದಿರುಗಿದಾಗ ಜಾನಕಿ ಅವನನ್ನು ಮಾತನಾಡಿಸುವ ಗೋಜಿಗೆ ಹೋಗಲಿಲ್ಲ. ಅಡಿಗೆಯಾಳು ತಂದು ಕೊಟ್ಟ ಕಾಫಿಕುಡಿದು ರೂಮಿನಲ್ಲಿ ರೇಡಿಯೋ ಕಿವಿಹಿಂಡುತ್ತ ಕುಳಿತ. ಹಾಡಿನ ಕಡೆ ಲಕ್ಷ್ಯವಿಲ್ಲ. ತಲೆಯಲ್ಲಿ ನೂರಾರು ಯೋಚನೆಗಳು. ಮನೆಯಲ್ಲಿ ಭೀಕರ ಶೂನ್ಯತೆ ಹಬ್ಬಿದಂತಾಗಿತ್ತು. ಆ ಶೂನ್ಯತೆ ಅಳಿಯಲೆಂದೇ ಅವನು ರೇಡಿಯೋವನ್ನು ಗಲಭೆಮಾಡಲು ಬಿಟ್ಟಿದ್ದ.

ಅಡಿಗೆಯಾಳು ಬಂದು 'ಊಟ ಸಿದ್ಧವಾಗಿದೆ' ಎಂದ.

"ಅಮ್ಮಾವರ ಊಟವಾಯಿತೇ ?"

"ನಿಮ್ಮದು ಆಗಲಿ ಎಂದು ಹೇಳಿದರು."

ಚಂದ್ರನಿಗೆ ಏನೋ ಯೋಚನೆ ಥಟ್ಟನೆ ಹೊಳೆಯಿತು.

"ರಾತ್ರಿ ಅಮ್ಮಾವರು ಊಟಮಾಡಿದರೇ ?"

"ಇಲ್ಲ. ಹಸಿವಿಲ್ಲವೆಂದು ಮಲಗಿಬಿಟ್ಟರು."

ಚಂದ್ರ ಎದ್ದು ಜಾನಕಿಯ ಕೋಣೆಗೆ ಹೋದ. ಅತ್ತು ಅತ್ತು ಕೆಂಪಗಾಗಿದ್ದ ಅವಳ ಕಣ್ಣುಗಳು ಮಾತಿನ ಅನವಶ್ಯಕತೆಯನ್ನು ಸಾರಿದವು. ಚಂದ್ರ ಅವಳ ಬಳಿ ಕುಳಿತ. ಏನು ಮಾತನಾಡಬೇಕೆಂದು ತೋರದಾಯಿತು.

"ನಿನ್ನೆ ರಾತ್ರಿ ಏಕೆ ಊಟಮಾಡಲಿಲ್ಲ?"

"ಹಸಿವಿರಲಿಲ್ಲ."

"ಈಗ....?"

"ನೀವು ಮಾಡಿ."

"ನೀನು....?"

"ನಾನು ಆಮೇಲೆ ಮಾಡುತ್ತೇನೆ."

"ಅಡಿಗೆ ಭಟ್ಟ ನನಗೆ ಕಾಫಿ ತಂದು ಕೊಟ್ಟುದು ಇದೇ ಮೊದಲು."

"ನನ್ನ ಕಂಡರೆ ನಿಮಗೆ ಬೇಸರ. ಸುಮ್ಮನೆ ಏಕೆ ತೊಂದರೆ ಮಾಡಲೆಂದು ಅವನ ಕೈಯಲ್ಲಿ ಕಳಿಸಿದೆ."

" ಇರಲಿ ಏಳು. ಇಬ್ಬರೂ ಊಟಮಾಡೋಣ. ಸಂಜೆ ಖಂಡಿತ ಸಿನೀಮಾಗೆ ಹೋಗೋಣ."

" ಸಿನೀಮಾಗೆ ಹೋಗಬೇಕೆಂದು ಹಟವಿಲ್ಲ. ನೀವು ನನ್ನ ಜತೆ ಇದ್ದರೆ ಸಾಕು."

" ಹಾಗೇ ಆಗಲಿ."

ಇಬ್ಬರೂ ಜತೆಯಲ್ಲಿ ಊಟಮಾಡಿ ಸಂಜೆ ಸಿನೀಮಾಕ್ಕೆ ಹೋಗಿ ಇರುಳನ್ನು ಜತೆಯಲ್ಲಿ ಕಳೆದರು. ಜಾನಕಿಯ ಮನಸ್ಸಿನಲ್ಲಿ ಕಳೆದು ಹೋಗಿದ್ದ ಧೈರ್ಯ ಮತ್ತೆ ತುಂಬಿತು. ಬಾಡುತ್ತಿದ್ದ ಅವಳ ಮುಖ ಮಂಡಲ ನವನವೋನ್ಮೇಷಶಾಲಿನಿಯಾಯಿತು. ಕೆನ್ನೆಯ ಮೇಲೆ ಮಾಸುತ್ತಿದ್ದ ಚೆಂಗುಲಾಬಿಯ ಕೆಂಪು ಮತ್ತೆ ಹುರುಪಿನಿಂದ ಹೊಮ್ಮ ತೊಡಗಿತು. ನಡೆಯಲ್ಲಿ ನುಡಿಯಲ್ಲಿ ಮೂಡಿದ್ದ ಬೇಸರಿಕೆ, ಆಲಸ್ಯ ವಿದ್ಯುದ್ವೇಗಕ್ಕೆ ಎಡೆಕೊಟ್ಟವು. ಚಂದ್ರ ಅವಳ ಬಾಳಬಳ್ಳಿ ಕೊನ ರುತ್ತಿದ್ದುದನ್ನು ಮನತೆರೆದು ಕಣ್ತುಂಬ ನೋಡುತ್ತಿದ್ದ. ಜಾನಕಿಗೆ ವೃಥಾ ದುಃಖವನ್ನುಂಟುಮಾಡಿದೆನಲ್ಲಾ ಎಂದು ಮುಮ್ಮಲ ಮರುಗು ತ್ತಿದ್ದ. ಅವನ ಬಾಳಿನಲ್ಲಾದ ಪರಿವರ್ತನ ಕಂಡು ಜಾನಕಿ ಸಂತೃಪ್ತ ಳಾದಳು; ಅವನ ಗೆಳೆಯರು ಬೆಕ್ಕಸ ಬೆರಗಾದರು. ಮನೆಯಲ್ಲಿದ್ದು ಕೊಂಡೇ ಇಲ್ಲವೆಂದು ರಾಜೂಗೆ ಕೂಡ ಹೇಳಿಕಳುಹಿಸಿದ್ದು ಜಾನಕಿಗೆ ಪರಮಾಶ್ಚರ್ಯವನ್ನುಂಟುಮಾಡಿತು.

೪

ರಾಜು ಬೇಸರವಡಲಿಲ್ಲ. ಚಂದ್ರ ಮನೆಯಲ್ಲಿಲ್ಲವೆಂದು ಹೇಳಿ ಕಳುಹಿಸಿದಾಗ ಅವನು ಮನೆಯಲ್ಲಿಯೇ ಇದ್ದಾನೆಂದು ರಾಜು ಚೆನ್ನಾಗಿ ಬಲ್ಲ. ಚಂದ್ರನ ಮಾತನ್ನು ನಂಬಿದುದಾಗಿ ನಟಿಸಿ ಹೊರಟುಹೋದ. ಮೂರು ನಾಲ್ಕು ಸಲ ಬಂದು ಅದೇ ಉತ್ತರ ಪಡೆದು ಹೋಗು ತ್ತಿದ್ದ. ಅವನ ಮನಸ್ಸಿನಲ್ಲಿ ವ್ಯಗ್ರತೆಯಿರಲಿಲ್ಲ, ಅಧೈರ್ಯವೂ ಇರಲಿಲ್ಲ.

ಬೆಂಗಳೂರು ರೇಸುಗಳ ಕಾಲ ಬಂತು. ಚಂದ್ರನಿಗೆ ರಾಜು ಜತೆಯಲ್ಲಿಲ್ಲದಿದ್ದರೆ ರೇಸು ರುಚಿಸುತ್ತಿರಲಿಲ್ಲ. ಜಾಕಿಗಳನ್ನು ಹಿಡಿದು, ಟ್ರೈನರ್‌ಗಳನ್ನಾಶ್ರಯಿಸಿ 'ಟಿಪ್ಸ್' ತರುತ್ತಿದ್ದವನು ಅವನೇ! ಕುದುರೆ

ಗಳ ಪೂರ್ವೋತ್ತರ ಅವನಿಗೆ ಕಂಠಪಾಠವಾಗಿತ್ತು. ಕುದುರೆಗಳ ಅಪ್ಪ, ಅಮ್ಮ, ಅಜ್ಜ, ಮುತ್ತಜ್ಜರ ಕಥೆ ಹೇಳುವುದಕ್ಕೆ ರಾಜು ಹೊರಟರೆ ಚಂದ್ರನ ಕಿವಿಗಳು ನಿಮಿರುತ್ತಿದ್ದವು. ಮೈಯೆಲ್ಲಾ ಕಿವಿ ಯಾಗುತ್ತಿತ್ತು.

ರೇಸಿನ ಕಾಲ ಸಮಾಪಿಸಿದರೂ ರಾಜೂ ಸುಳಿವಿಲ್ಲ. ಚಂದ್ರನಿಗೆ ಯೋಚನೆ ಹತ್ತಿತ್ತು. ಜಾನಕಿಯಿಂದ ಮೆಲ್ಲನೆ ಜಾರಿಕೊಂಡು ರಾಜು ವನ್ನು ಕ್ಲಬ್ಬಿನಲ್ಲಿ ಪತ್ತೆ ಹಚ್ಚಿದ. ತನ್ನ ತಾತ್ಸಾರವನ್ನು ಕ್ಷಮಿಸ ಬೇಕೆಂದು ಅಂಗಲಾಚಿ ಬೇಡಿದ. ರಾಜು ತನ್ನ ಟಿಪ್ಸ್ ಪುಸ್ತಕ ತೆಗೆದು ಚಂದ್ರನಿಗೆ ಪಾಠಮಾಡಿಸಿದ. ಇಬ್ಬರೂ ಕೂಡಿ ತಮ್ಮ ಕುದುರೆಗಳ ಪಟ್ಟಿ ಸಿದ್ಧಗೊಳಿಸಿದರು.

ಮಾರನೆಯ ಬೆಳಿಗ್ಗೆ ರಾಜು ಚಂದ್ರೂವನ್ನು ಹುಡಿಕಿಕೊಂಡು ಬಂದ. ಚಂದ್ರೂ ಎದ್ದು ಹೋಗಿ ಅವನನ್ನು ಪ್ರೀತಿಯಿಂದ ಸ್ವಾಗತಿಸಿ ಒಳಗೆ ಬರಮಾಡಿಕೊಂಡ. ಈ ದೃಶ್ಯ ಕಂಡ ಜಾನಕಿಯ ಕರುಳಿಗೆ ವೇದನೆಯಾಯಿತು. ಆದರೆ ತನ್ನಷ್ಟಕ್ಕೆ ತಾನೇ ಸಮಾಧಾನ ಹೇಳಿ ಕೊಂಡಳು. 'ಗಂಡಸರನ್ನು ಮನೆಯಲ್ಲಿ ಕೂಡುವುದಕ್ಕಾಗುತ್ತದೆಯೇ. ಸ್ನೇಹಿತರ ಜತೆ ಹೋಗಬೇಡಿರೆನ್ನಲಾಗುತ್ತದೆಯೇ?' ಎಂದುಕೊಂಡಳು. ಆದರೆ ಮರುಕ್ಷಣವೇ 'ಈ ರಾಜುವಲ್ಲದೆ ಬೇರೆ ಸ್ನೇಹಿತರೇ ಇಲ್ಲವೇ?' ಎಂದು ಕೇಳಿಕೊಂಡಳು.

ಚಂದ್ರೂ ರಾಜುವಿನೊಂದಿಗೆ ರೇಸಿಗೆ ಹೋಗುವುದೆಂದು ಮೊದಲೇ ನಿಶ್ಚಯವಾಗಿತ್ತು. ಇಬ್ಬರೂ ಹೊರಟದ್ದನ್ನು ಎವೆಯಿಕ್ಕದೆ ಜಾನಕಿ ನೋಡುತ್ತ ನಿಂತಳು. ಚಂದ್ರೂ ಒಮ್ಮೆ ಕಣ್ತಿರುಗಿಸಿ ನೋಡಿದ. ಜಾನ ಕಿಯ ಮುಖದ ಮೇಲೆ ಮೂಡಿದ್ದ ಕಳವಳ ಅವನ ಚಿತ್ತದ ಮೇಲೆ ಅಚ್ಚೊತ್ತಿತು. ದಾರಿಯಲ್ಲಿ ಅವನು ಮಾತೇ ಆಡಲಿಲ್ಲ. ರಾಜು ಪ್ರಯತ್ನಿಸಿ ವಿಫಲನಾದ.

ಫಸ್ಟ್ ಎನ್‌ಕ್ಲೋಸರ್ ಪ್ರವೇಶಿಸಿದೊಡನೆಯೇ ಚಂದ್ರೂ ಚಹರೆ ಬದಲಾಯಿಸಿತು. ಅಲ್ಲಿದ್ದ ಜನ, ಸಡಗರ, ಹಣದ ವಹಿವಾಟು ಅವನನ್ನು ನುಂಗಿಬಿಟ್ಟಿತು. ತನ್ನ ಕುದುರೆಗಳ ಪಟ್ಟಿ ಹಿಡಿದು ಹಣ ಚೆಲ್ಲ

ಲಾರಂಭಿಸಿದ. ಕೆಲವು ಪಂದ್ಯಾಟಗಳಲ್ಲಿ ಹಣ ಕೊಚ್ಚಿಕೊಂಡುಹೋಯಿತು. ಹಣ ಹೋದಷ್ಟೂ ಉತ್ಸಾಹ ಹೆಚ್ಚಿತು. ಮಹಾರಾಜಾ ಕಪ್ಪಿನ ರೇಸಿಗೆ ತನ್ನ ಬಳಿಯಿದ್ದ ರೂ. ೨೦೦೦ ಕಟ್ಟಿದ. ಕೋಹಿನೂರ್ ಗೆದ್ದೇ ಗೆಲ್ಲುವುದೆಂದು ಅವನಿಗೆ ರಾಜೂ ಭರವಸೆ ನೀಡಿದ.

ಓಡುವುದಕ್ಕೆ ಕುದುರೆಗಳು ಬಂದು ನಿಂತವು. ಅವುಗಳನ್ನು ಒಂದೇ ಸಾಲಿಗೆ ನಿಲ್ಲಿಸಿ ಓಡಿಸಲು ಸ್ಟಾರ್ಟರಿಗೆ ಕೆಲವು ನಿಮಿಷ ಬೇಕಾಯಿತು.

ಕೈಯಲ್ಲಿ ದುರ್ಬೀನು ಹಿಡಿದು ಕುಳಿತಿದ್ದ ಚಂದ್ರೂ ಅದನ್ನು ಸ್ಟ್ಯಾಂಡಿನ ಸುತ್ತ ಹೊರಳಿಸಿ ನೋಡಿದ. ಜನ ಉದ್ವೇಗಪರವಶರಾಗಿದ್ದರು. ಅವನು ಕುಳಿತಿದ್ದೆಡೆಯಿಂದ ಸ್ವಲ್ಪ ದೂರದಲ್ಲಿ, ಒಂದೆರಡು ಸಾಲು ಮುಂದುಗಡೆ ಒಬ್ಬ ಹೆಂಗಸು ಕುಳಿತಿದ್ದುದು ಕಂಡು ಬಂತು. ಆಕೆ ಆಗಾಗ್ಗೆ ಕಣ್ಣು ಹೊರಳಿಸಿ ತಮ್ಮ ಕಡೆ ನೋಡುತ್ತಿರುವಂತೆ ಕಂಡು ಬಂತು. ದುರ್ಬೀನು ಇಳಿಸಿ ಮೆಲ್ಲನೆ ರಾಜುವಿಗೆ

"ಆಕೆ ಯಾರು ರಾಜು?" ಎಂದು ಕೇಳಿದ.

ರಾಜು ಕೈಗೆ ದುರ್ಬೀನು ತೆಗೆದುಕೊಂಡು ಚಂದ್ರು ಗುರುತಿಸಿ ತೋರಿಸಿದ ಹೆಂಗಸನ್ನು ನೋಡಿದ. ಅವನು ದುರ್ಬೀನು ಇಳಿಸುತ್ತಿರುವಂತೆ ಆಕೆ ಅವನ ಮುಖ ಕಂಡು ನಕ್ಕಳು ರಾಜುವೂ ನಕ್ಕ. ಚಂದ್ರೂ ಕೇಳಿದ

"ನಿನಗೆ ಗುರುತೇನೋ?"

"ಹೂ!"

ಎಂದು ಮಾತು ಬೆಳಸುವುದರಲ್ಲಿ ರೇಸ್ ಸ್ಟಾರ್ಟಾಯಿತು. ಜನರ ಕೇಕೆ, ಉತ್ಸಾಹ, ಉದ್ವೇಗ, ಗಲಭೆ ಹೆಚ್ಚಿತು. ಚಂದ್ರುವೂ ಅವರಲ್ಲಿ ಬೆರೆತುಬಿಟ್ಟ. ಚಂದ್ರೂ ಹಣ ಕಟ್ಟಿದ್ದ 'ಕೋಹಿನೂರ್' ಕುದುರೆ ಗೆದ್ದಿತ್ತು. ಅವನ ಎರಡು ಸಾವಿರ ರೂಪಾಯಿ ಆರು ಸಾವಿರರೂಪಾಯಾಗಿತ್ತು. ಗೆಲುವಿನ ಸುಮ್ಮಾನದಲ್ಲಿರುವಂತೆ ಅವನು ಗುರುತಿಸಿದ್ದ ಹೆಂಗಸು ಹೊರ ಹೊರಟಿದ್ದುದನ್ನು ಕಂಡು, ಆತುರದಿಂದ ರಾಜುವಿನ ಗಮನವನ್ನತ್ತ ಸೆಳೆದು

"ಹೊರಟುಬಿಟ್ಟಿದ್ದಾಳಲ್ಲೋ?"

" ಹೋಗಲಿಬಿಡು. "

" ಗುರುತುಮಾಡಿಕೊಡಲ್ವೇ ? "

" ಗುರುತುಮಾಡಿ ಕೊಡಬೇಕೇ – ಬಾ "

ಎಂದು ಜತೆಯಲ್ಲಿ ಕರೆದೊಯ್ದ. ಹೆಂಗಸು ಜನಸಂದಣಿಯಲ್ಲಿ ಜಾಗಬಿಡಿಸಿಕೊಂಡು ಹೊರಟಿದ್ದಳು. ರಾಜು ಅವಳನ್ನು ಒಂದು ಪಕ್ಕಕ್ಕೆ ಕರೆದು

" ಏಕೆ ಮುನಿರತ್ನಾ – ಹೊರಟುಬಿಟ್ಟೆ. "

" ಇನ್ನೇನು ಮಾಡಲಿ ಹೇಳು. ಐದು ನೂರು ರುಪಾಯಿ.... "

ಅವಳ ಕಣ್ಣುಗಳಲ್ಲಿ ನೀರು ತುಂಬಿ ಬಂತು. ಗಂಟಲುಬ್ಬಿ ಬಂತು.

" ಯಾವದರ ಮೇಲೆ ಬೆಟ್ ಮಾಡಿದ್ದೆ? "

" ಹಾಳು ಷಾ ಆಲಂ ಮೇಲೆ. ಅದು ಗೆದ್ದೇ ಗೆಲ್ಲುವುದೆಂದು ನಾನು ಭರವಸೆಯಿಟ್ಟುಕೊಂಡಿದ್ದೆ. "

" ನನ್ನ ಸ್ನೇಹಿತರು ಚಂದ್ರಶೇಖರರಾಯರ ಪರಿಚಯ ಮಾಡಿಕೋ."

ಮುನಿ ಮಾತನಾಡದೆ ಕೈಮುಗಿದಳು. ಚಂದ್ರೂ ಅವಳನ್ನು ಸಮಾಧಾನಪಡಿಸುವಂತೆ

" ಬಹಳ ಹಣ ಹೋಯಿತೇ ? "

" ಐದು ನೂರು ರೂಪಾಯಿ."

" ಮುಂದಿನ ರೇಸ್ ನೋಡಿ – ಅದೃಷ್ಟ ಬದಲಾಯಿಸಬಹುದು "

" ಬೇಡ. ನನ್ನ ಅದೃಷ್ಟ ಈ ರೇಸಿನಲ್ಲೇ ತಿಳಿದುಹೋಯಿತು. ಮನೆಗೆ ಹೊಗುತ್ತೇನೆ."

" ಒಬ್ಬರೇ ! "

" ಇಲ್ಲ ಆಳು ಜವರ ಹೊರಗಡೆ ಕುಳಿತಿದ್ದಾನೆ."

" ನನ್ನ ಕಾರಿದೆ. ಬೇಕಿದ್ದರೆ ಕರೆದೊಯ್ದು ಬಿಟ್ಟು ಬರುತ್ತೇನೆ."

" ಆಗಬಹುದು " ಎಂದಳು.

ಚಂದ್ರೂ ತನ್ನ ಗೆಲುವಿನ ಹಣ ತೆಗೆದುಕೊಂಡು ಬರಲು ಹೋದಾಗ ರಾಜೂ ಮುನಿರತ್ನಳಿಗೆ ಅವನ ವಿಸ್ತೃತ ಪರಿಚಯಮಾಡಿ

ಕೊಟ್ಟ. ಮುನಿರತ್ನನ್ನ ಮುಖದ ಮೇಲೆ ಮೂಡಿದ್ದ ದುಃಖ ಸ್ವಲ್ಪ ಉಪಶಮನವಾಯಿತು.

ಚಂದ್ರೂ ಬಂದವನೇ ಮುನಿರತ್ನ, ರಾಜುವೊಂದಿಗೆ ಅವರ ಮನೆಯ ಕಡೆ ತನ್ನ ಕಾರಿನಲ್ಲಿ ಹೊರಟ. ಜವರ ಡ್ರೈವರ ಪಕ್ಕದಲ್ಲಿ ಕುಳಿತುಕೊಂಡ.

ಚಾಮರಾಜಪೇಟೆ ನಾಲ್ಕನೆಯ ರಸ್ತೆಯ ಕೊನೆಯಲ್ಲಿ ಒಂದೇ ಮನೆ. ಅಕ್ಕಪಕ್ಕದಲ್ಲಿ ಮನೆಗಳಿರಲಿಲ್ಲ. ಒಂದೆರಡು ಇಟ್ಟಿಗೆ ಗೂಡು ಗಳು ಮಾತ್ರ ಅಸ್ಥಿಪಂಜರದಂತೆ ನಿಂತಿದ್ದವು. ಜವರ ಡ್ರೈವರಿಗೆ ಮನೆ ಗುರುತು ತಿಳಿಸಿದ. ಕಾರು ಬಂದು ನಿಂತಿತು. ಮುನಿರತ್ನ ಕಾರಿನಿಂದಿಳಿ ದಳು. ಜವರನೂ ಇಳಿದ. ಚಂದ್ರೂ ಹೊರಡಲನುವಾದುದನ್ನು ಕಂಡು

"ಒಳಗೆ ಬಂದು ಸ್ವಲ್ಪ ಕಾಫಿ ತೆಗೆದುಕೊಳ್ಳಬಾರದೆ ?"

ಚಂದ್ರೂ ರಾಜುನಮುಖನೋಡಿದ. ರಾಜು ಕಾರಿನಿಂದಿಳಿಯುತ್ತಾ

"ಬಾರಯ್ಯಾ ಒಳಗೆ" ಎಂದ.

ಇಬ್ಬರೂ ತೊಟ್ಟಿಯಲ್ಲಿ ಕುಳಿತರು. ಮುನಿರತ್ನ ಅವರ ಅಪ್ಪಣೆ ಪಡೆದು ಬಟ್ಟೆ ಬದಲಾಯಿಸಿ ಬರಲು ಒಳಗೆ ಹೋದಳು. ಚಂದ್ರೂ ಮನೆ ಸುತ್ತ ಕಣ್ಣು ಹೊರಳಿಸಿ ನೋಡಿ 'ಏನು ಸಮಾಚಾರ ?'

"ಏನೂ ಇಲ್ಲ. ನಿರಾತಂಕವಾಗಿರಬಹುದು."

ಚಂದ್ರೂ ಮುಖದಲ್ಲಿ ಮಂದಹಾಸ ಮೂಡಿತು.

"ರಾಜೂ, ಇವತ್ತು ನಾನು ರೇಸಿನಲ್ಲಿ ಗೆದ್ದಿದ್ದೇನೆ......."

"ಹೌದು !"

"ಹಬ್ಬ ಮಾಡಬೇಕಯ್ಯಾ ?"

"ಫನಲ್ಸಿಗೆ ಹೋದರೆ...."

"ಬೇಡ.... ಇಲ್ಲೇ ತರಿಸಿದರೆ.... ಈಕೆ.... ?"

"ತರಿಸಿನೋಡು. ಈಕೆ ಸ್ವೀಕರಿಸುತ್ತಾಳೋ ಇಲ್ಲವೋ ಗೊತ್ತಾ ಗುತ್ತದೆ.

"ನೀನೇ ವ್ಯವಸ್ಥೆಮಾಡಪ್ಪ."

ರಾಜು ' ಮುನೀ ' ಎಂದು ಕೂಗಿದ. ಅವಳು ಒಳಗಿನ ರೂಮಿ ನಿಂದಲೇ ' ಓ ' ಎಂದಳು.

" ರಾಯರು ಇವತ್ತು ಪಾರ್ಟಿನ ಕೊಡುತ್ತಾರಂತೆ ! ಸ್ವಲ್ಪ ಇಲ್ಲಿ ಬಾ. "

ಮುನಿರತ್ನ ಒಂದೆರಡು ನಿಮಿಷಗಳಲ್ಲಿ ಹೊರಗೆ ಬಂದಳು.

" ಏನು ಕರೆದಿರಿ ? "

" ಕೇಳಿಸಲಿಲ್ಲವೇ— ಇವತ್ತು ರಾಯರದು ಪಾರ್ಟಿ. ಆಗ ಬಹುದೋ ? "

" ಬೇಡವೆಂದವರು ಯಾರು ? "

" ಇನ್ನು ಯಾರೂ ಬರುವ ಸಂಭವವಿಲ್ಲವಷ್ಟೇ ? "

" ಯಾರೂ ಬರುವುದಿಲ್ಲ. "

" ಹಾಗಾದರೆ ಏನೇನು ಬೇಕೋ ತರಿಸು. "

ಚಂದ್ರ ಅವನಿಗೆ ನೂರು ರೂಪಾಯಿ ಇತ್ತ. ಅದನ್ನು ರಾಜು ಮುನಿರತ್ನನ ಕೈಗೆ ಹಾಕಿದ.

" ಪಾರ್ಟಿಗೆ ಮೂರು ಜನರಾಗುತ್ತೇವಲ್ಲಾ ! "

" ಯಾರೂ ಬೇಡವೆಂದು ನೀವೇ ಅಂದಿರಿ. "

" ಇನ್ನು ಒಬ್ಬರಿದ್ದರಾಗಿತ್ತು. "

ಎಂದು ನಕ್ಕ. ಮುನಿಯೂ ನಗುತ್ತ ' ಕಮಲಾನ ಕರೆಸಲೇನು ? '

" ಖಂಡಿತವಾಗಿ. "

ಮುನಿರತ್ನ ಜವರನನ್ನು ಕರೆದು ಅವನ ಕೈಗೆ ಹಣವಿತ್ತು ಬೇಕಾದ ಸಾಮಾನುಗಳ ವಿವರ ತಿಳಿಸಿದಳು. ' ಹಾಗೇ ಬರುವಾಗ ಕಮಲಾನ ಕರೆದುಕೊಂಡು ಬಾ. ಅವಳು ಇಲ್ಲದಿದ್ದರೆ ಸುಭದ್ರಾನ ಕರೆದುಕೊಂಡು ಬಾ. '

ಜವರ ಹೊರಟುದನ್ನು ಕಂಡ ರಾಜು ' ನೋಡು ಮುನೀ— ಜವರ ನಡೆದುಕೊಂಡು ಹೋಗಿ ಬರುವುದಕ್ಕೆ ಬಹಳ ಹೊತ್ತಾಗಬಹುದು. ಹೊರಗಡೆ ಕಾರು ನಿಂತಿದೆ. ಅದರಲ್ಲಿ ಹೋಗಿ ಬರಲಿ. '

' ಒಳ್ಳೆಯದು ' ಎಂದು ಜವರನನ್ನು ಕಾರಿನಲ್ಲಿ ಕಳುಹಿಸಿಕೊಟ್ಟಳು.

ಮುನಿ ಮನೆ ಸಾಕಷ್ಟು ವಿಶಾಲವಾಗಿತ್ತು. ಒಂದು ದೊಡ್ಡ ತೊಟ್ಟಿ, ನಾಲ್ಕು ಕೋಣೆಗಳಿದ್ದವು. ಅಡಿಗೆ ಸಾಲೆ, ಸ್ನಾನಗೃಹ ಪ್ರತ್ಯೇಕವಾಗಿದ್ದವು. ಚಂದ್ರೂ ಮನೆಯ ಅಂದ ಚೆಂದ ನೋಡುತ್ತ ಮನಸ್ಸಿನಲ್ಲಿ ಏನೇನೋ ಎಣಿಕೆ ಹಾಕಿಕೊಳ್ಳುತ್ತಿದ್ದ. ಅವನ ಮುಖದಮೇಲೆ ಒಂದು ಪ್ರಶ್ನಮಾಲೆಯೇ ಕಾಣುತ್ತಿತ್ತು. ರಾಜು ನಗುತ್ತಾ

" ಏನಿದು ರಹಸ್ಯ ಅನ್ನಿಸುತ್ತಿದೆಯಲ್ಲವೇ ? "

" ನಿನ್ನ ವೈವಾಟ ಯಾರಿಗೆ ಪತ್ತೆಯಾಗುತ್ತದಯ್ಯಾ— ಎಲ್ಲಾ ಚಿದಂಬರ ರಹಸ್ಯ. "

" ನಾನು ನಿಷ್ಪ್ರಯೋಜಕ ಎಂದು ಅನಿಸುವುದಿಲ್ಲವಲ್ಲಾ ! "

" ಯಾವಾಗ ಅನ್ನಿಸಿತ್ತು. ಅದಿರಲಿ— ಏನು ಈ ಮನೆ ಸಮಾಚಾರ ? "

" ಇದನ್ನು ಕೇಳುವುದಕ್ಕೆ ನೀನು ಕುತೂಹಲ ಪಡುತ್ತಿರುವುದನ್ನು ನಾನು ಬಲ್ಲೆ. ಇಷ್ಟೇ ಸಮಾಚಾರ. ಈ ಮನೆ ಯಜಮಾನ ಒಬ್ಬ ಬೀರೂರು ಶೆಟ್ಟಿ. ಈ ವೈಭವವೆಲ್ಲಾ ಅವನ ಕೃಪಾಕಟಾಕ್ಷ. "

" ಹಾಗಾದರೆ ನಾವು.... "

" ಅವನು ಬರುವುದು ತಿಂಗಳಿಗೊಮ್ಮೆ. ಉಳಿದ ದಿನಗಳಲ್ಲಿ ಮಿಕ್ಕ ಗೆಳೆಯರನ್ನು ಆದರಿಸಬೇಡವೇ ? "

" ಸರಿ. ನಮಗೇನೂ ತೊಂದರೆಯಿಲ್ಲವಲ್ಲಾ.... "

" ತೊಂದರೆಯಿದ್ದರೆ ನಾನು ಕರೆದುಕೊಂಡು ಬರುತ್ತಿದ್ದೆನೇ ? "

" ಒಬ್ಬಳೇ ಇರುವ ಹಾಗೆ ಕಾಣುತ್ತದೆ. "

" ಇಲ್ಲ. ಒಂದು ಮುಳ್ಳು ಬೇಲಿಯೂ ಇದೆ. "

" ಮುಳ್ಳು ಬೇಲಿ ! "

" ಹೂ ಅವರಮ್ಮ. ಆ ಮುದುಕಿಯನ್ನು ನಿಭಾಯಿಸಿದರೆ ಜಗತ್ತೇ ಆಳಬಹುದು. "

" ಹಾಗಾದರೆ ಕಂಬಿ ಕೀಳೋಣವೇ ? "

" ಹುಚ್ಚಾ ! ಸರ್ವಾಂತರ್ಯಾಮಿ ಹಣವಿರುವವರೆಗೆ ಏನಯ್ಯಾ ಭಯ. "

" ಎಷ್ಟು ಹೊತ್ತಾಯಿತು. ಹೋದ ಆಳು ಬರಲೇ ಇಲ್ಲವಲ್ಲಾ ! "

" ಅಷ್ಟೇನು ಆತುರ. ಬರುತ್ತಾನೆ. "

" ಮನೆಗೆ ಹೋಗುವುದು ಬೇಡವೇ ? "

" ಹೋದರಾಯಿತು. "

" ಎಂದು ? "

" ಇಂದು— ನಾಳೆ ! "

ಎಂದು ರಾಜು ನಕ್ಕ.

೫

ಜವರ ' ಅಮ್ಮಣ್ಣಿಯೋರು ' ಹೇಳಿದ್ದ ಕೆಲಸವನ್ನೆಲ್ಲಾ ಚಾಚೂ ತಪ್ಪದೆ ಮಾಡಿಕೊಂಡು ಬಂದಿದ್ದ. ' ರಾಜಪ್ನೋರ ' ಕೆಲಸವನ್ನೂ ಮಾಡಿಕೊಂಡು ಬಂದಿದ್ದ. ಕಮಲೂ, ಸುಭದ್ರಾ ಇಬ್ಬರೂ ರೇಸಿನಿಂದ ಹಿಂದಿರುಗಿರಲಿಲ್ಲ. ಜವರ ಬುದ್ಧಿಯೋಡಿಸಿ ಲಕ್ಷ್ಮ್ಮನ ಕರೆದುಕೊಂಡು ಬಂದಿದ್ದ.

ಚಂದ್ರ ರೇಸಿನಲ್ಲಿ ನೋಡಿದ್ದುದು ಮುನಿರತ್ನಳ ಬೆಂದ, ನೊಂದ ಮುಖ. ಬೆಳಿಗ್ಗೆಯಿಂದ ರೇಸ್‌ಕೋರ್ಸಿನ ಬಿಸಿಲಿನಲ್ಲಿ ಓಡಿಯಾಡಿ ಅವಳ ಮುಖ ಕಂದಿತ್ತು. ಸೋಲಾದ ಮೇಲಂತೂ ಅವಳ ಮುಖ ತೀರ ಕಂಗೆಟ್ಟಿತ್ತು.

ಜವರ ಬರುವ ಹೊತ್ತಿಗೆ ಅಲಂಕಾರ ಮುಗಿಸಿ ಮುನಿ ಸಿಸ್ತಾ ದಳು. ಮುಖಕ್ಕೆ ಎರಡು ವರಸೆ ಪೌಡರ್ ಹಚ್ಚಿದಳು, ತುಟಿಗೆ ರೂಜ್. ತಲೆಗೂದಲನ್ನು ಅಣಿಯಾಗಿ ಬಾಚಿ ಹೆರಳು ಹಾಕಿಕೊಂಡು ಅದಕ್ಕೆ ಅಂದವಾಗಿ ಹೂ ಮುಡಿಸಿದಳು. ತನ್ನ ಗಟ್ಟಿ ಬಣ್ಣ ಮುಚ್ಚಲು ತೆಳ್ಳನೆಯ ಬಿಳೀ ಜಾರ್ಜೆಟ್ ಸೀರೆ, ಕೆಂಪು ಕುಪ್ಪಸ ಧರಿಸಿದಳು.

ಮುನಿರತ್ನಳನ್ನು ಎಂಥ ಅಂಥ ನಲ್ಲನೂ ರೂಪಸಿಯೆಂದು ಕರೆಯ ಲಾಗುತ್ತಿರಲಿಲ್ಲ. ಅವಳ ಅಚ್ಚಗಪ್ಪು ಬಣ್ಣದಲ್ಲಿ ಅವಳ ಮುಖಲಕ್ಷಣ, ದೇಹ ಪ್ರಮಾಣ ಅದೃಶ್ಯವಾಗುತ್ತಿತ್ತು. ಕಪ್ಪನೆಯ ಮುಖದಮೇಲೆ

ಅವಳು ಧರಿಸಿದ ಮುತ್ತಿನ ಓಲೆ, ಅವಳಿಗೆ ಒಂದು ಕಾಂತಿ ಕೊಟ್ಟಿತ್ತು. ತುಂಬಿದ ಎದೆ, ತುಂಬಿದ ಮೈ ಒಂದು ವಿಚಿತ್ರ ಆಕರ್ಷಣೆಗಳಿಂದ ಕೂಡಿದವು.

ಹೊರಬಂದ ಮುನಿಯನ್ನು ನೋಡಿ ಚಂದ್ರ ಚಕಿತನಾದ. ಏನೋ ಒಂದು ವಿಲಕ್ಷಣಶಕ್ತಿ ಅವನಮೇಲೆ ಹಾದು ಹೋದಂತಾಯಿತು.

ತಂದಿದ್ದ ಸಾಮಾನುಗಳನ್ನು ಒಳಗೆ ಇಡು ಎಂದು ಜವರನಿಗೆ ಹೇಳಿ ತಾನು ಲಕ್ಷ್ಮೀ ಕೈ ಹಿಡಿದು ಅತಿಥಿಗಳ ಬಳಿ ಬಂದಳು.

" ರಾಯರು ಹೊರಡಬೇಕೂಂತಾರಲ್ಲೇ ಮುನಿ. "

" ಏಕೆ ಸ್ವಾಮಿ ಅಷ್ಟು ಆವಸರ. ಇವಳ ಪರಿಚಯ ಮಾಡಿಕೊಳ್ಳಿ. ನಮ್ಮ ರಾಜಪ್ನೋರ....''

ಮೇಜುವಾನಿಗೆ ಎಲ್ಲ ವ್ಯವಸ್ಥೆಮಾಡಿ ಜವರ ಬಂದು ತಿಳಿಸಿದ. ಮುನಿ ನಸುನಗುತ್ತ ಚಂದ್ರನ ಕೈಹಿಡಿದೆಬ್ಬಿಸಿದಳು ; ರಾಜು ಲಕ್ಷ್ಮೀ ಕೈಹಿಡಿದುಕೊಂಡ.

ನಾನಾ ಬಗೆ ತಿನಿಸುಗಳು, ಹಣ್ಣುಹಂಪಲು, ವಿಸ್ಕಿಶೀಷೆ, ಸೋಡಾ ಬಾಟಲುಗಳು ಅತಿಥಿಗಳ ದಾರಿ ನೋಡುತ್ತಿದ್ದವು. ಮುನಿ ವಿಸ್ಕಿಶೀಷೆ ತೆಗೆದು ನಾಲ್ಕು ಗ್ಲಾಸುಗಳಿಗೆ ಬಗ್ಗಿಸಿದಳು. ರಾಜು ಸೋಡಾ ಶೀಷೆ ತೆಗೆದು ಎಲ್ಲ ಗ್ಲಾಸುಗಳಿಗೂ ಸ್ವಲ್ಪಸ್ವಲ್ಪ ಬೆರಸಿದ. ಗ್ಲಾಸುಗಳನ್ನು 'ಕ್ಲಿಂಕ್' ಮಾಡಿ ಎಲ್ಲರೂ ಸೇವನೆಗಾರಂಭಿಸಿದರು. ಮಧ್ಯೆ ಮಧ್ಯೆ ರಸರಸವಾದ ಮಾತು. ಒಂಭತ್ತು ಗಂಟೆಯುವರೆಗೆ ಇದು ಒಂದೇ ಸಮನಾಗಿ ಸಾಗಿತು. ಚಂದ್ರೂಗೆ ಮೈಮೇಲೆ ಪರಿವೆಯೇ ಇಲ್ಲ. ಮನೆಯ ನೆನಪಂತೂ ಹಾರಿಹೋಯಿತು. ಒಂಭತ್ತು ಗಂಟೆ ಹೊಡೆದದ್ದು ಕೇಳಿದ ರಾಜು

" ಚಂದ್ರೂ, ಕಾರ್ ಒಣಗುತ್ತಾ ನಿಂತಿದೆ."

" ನಿಂತಿರಲಿ ಬಿಡು."

" ಮನೆಗಾದರೂ ಹೋಗು ಎಂದು ಹೇಳೋಣ."

ಚಂದ್ರೂ ಮುನಿರತ್ನಳ ಮುಖ ನೋಡಿದ. ಅವಳು ಲಲ್ಲೆಗರೆ ಯುತ್ತಾ ಅವನ ಕುರುಳು ತೀಡುತ್ತ

"ಕಳಿಸಿ ಬಿಡಿ" ಎಂದಳು.

ಚಂದ್ರೂ ಎದ್ದು ಹೋಗಿ ಡ್ರೈವರನ್ನು ಕಳುಹಿಸಿಬಂದ. ವಿಸ್ಕಿಶೀಷೆಗಳು ಮುಗಿದು ಅವು ಕೆಳಗೆ ಬಿದ್ದು ಒಂದಕ್ಕೊಂದು ಡಿಕ್ಕಿ ಕೊಡುವವರೆಗೆ ಯಾರೂ ಸ್ಥಳ ಬಿಟ್ಟು ಕದಲಲಿಲ್ಲ. ಗಂಟೆ ಹನ್ನೊಂದಕ್ಕೆ ಬಂದಿತ್ತು. ಮುನಿ ಲಕ್ಷ್ಮಾಗೆ, ರಾಜೂಗೆ ಒಂದು ಕೋಣೆ ತೋರಿಸಿ ಚಂದ್ರುವನ್ನು ಕೈಹಿಡಿದುಕೊಂಡು ತನ್ನ ಶಯ್ಯಾಗೃಹಕ್ಕೆ ಕರೆದೊಯ್ದಳು.

೬

"ಯಜಮಾನರನ್ನು ಎಲ್ಲಿ ಬಿಟ್ಟು ಬಂದೆಯೋ?"

"ಹೇಳಿದೆನಲ್ಲಾ ತಾಯೀ, ಬಸವನಗುಡಿ ಗಾಂಧೀಬಜಾರಿನಲ್ಲಿ ಇಳಿದು ಅವರೂ ರಾಜಪ್ನೋರು ನಡೆದುಕೊಂಡು ಹೋದರು. 'ನನ್ನ ಮನೆಗೆ ಹೋಗು ಎಂದರು."

"ಯಾವಾಗ ಬರುತ್ತೇವೆಂದರು?"

"ವಿಷಯ ಏನೂ ಹೇಳಲಿಲ್ಲ ತಾಯೀ."

ಜಾನಕಿ ಕುಸಿದು ಕುಳಿತಳು. ಅವಳ ಕಣ್ಣಲ್ಲಿ ಧಾರೆ. ಡ್ರೈವರ್ ನೋಡದಿರಲೆಂದು ಕೈಯಲ್ಲಿದ್ದ ವಸ್ತ್ರದಿಂದ ಮುಖಮುಚ್ಚಿಕೊಂಡು

"ಸರಿ — ನೀನು ಹೋಗು" ಎಂದಳು.

ಡ್ರೈವರಿಗೆ ಉಸಿರು ಗಂಟಲಿಗೆ ಬಂತು. ಮನೆಯೊಡತಿಯ ಅಳಲನ್ನು ಕಂಡು ಅವನ ಹೃದಯದಲ್ಲಿ ತಳಮಳ ಹುಟ್ಟಿತ್ತು. ಯಜಮಾನರು ಹೇಳಿಕೊಟ್ಟಿದ್ದ ಪಾಠವನ್ನು ಸರಿಯಾಗಿ ಒಪ್ಪಿಸಿದ್ದ. ಆದರದು ಸುಳ್ಳಿನ ಕಂತೆಯೆಂಬುದನ್ನು ಬಲ್ಲ. ತನ್ನ ದುರ್ವಿಧಿಯನ್ನು ಶಪಿಸಿದ. ಆದರೆ—ಆದರೆ—ಯಜಮಾನರು ಹಿಂದಿನ ರಾತ್ರಿ ಇಪ್ಪತ್ತು ರೂಪಾಯಿ ಭಕ್ಷೀಸ್ ಒಗೆದಿದ್ದರು. ಅವನೂ ಮಕ್ಕಳೊಂದಿಗ.

ಮಾರನೆಯ ದಿನ ಕಳೆಯಿತು — ಅದರ ಮಾರನೆಯ ದಿನ ಕಳೆಯಿತು. ಅದರ ಮಾರನೆಯ ದಿನವೂ ಕಳೆಯಿತು. ಮೂರು ರಾತ್ರಿಗಳನ್ನು ಒಂದೇ ಸಮನಾಗಿ ಚಂದ್ರೂ, ರಾಜೂ ಮುನಿರತ್ನಳ ಮನೆಯಲ್ಲಿ

ಕಳೆದಿದ್ದರು. ಚಂದ್ರನ ಜೇಬು ಬರಿದಾಗಿತ್ತು. ಮನೆಗೆ ದುಡ್ಡಿಗಾದರೂ ಹೋಗಿ ಬರಲೇ ಬೇಕಾಗಿತ್ತು.

ಮುನಿಯನ್ನು ಬಿಟ್ಟು ಹೊರಡಲು ಅವನಿಗೆ ಸ್ವಲ್ಪವೂ ಮನಸ್ಸಿಲ್ಲ. ಆದರೆ ಹೋಗದಿದ್ದರೆ ನಿರ್ವಾಹವಿಲ್ಲ. ಕೈಯಲ್ಲಿ ಸಿಗರೇಟಿಗೂ ಕಾಸು ಉಳಿದಿರಲಿಲ್ಲ. ರೇಸಿಗೆ ತೆಗೆದುಕೊಂಡು ಹೋಗಿದ್ದುದು ಅಲ್ಲಿ ಸಂಪಾದಿಸಿದ್ದು ಎಲ್ಲಾ ಮುಗಿದು ಹೋಗಿತ್ತು.

ನಾಲ್ಕನೆಯ ಬೆಳಿಗ್ಗೆ ಹೊರಡಲನುವಾದ. ಮುನಿ ಅವನ ಬಳಿ ಬಂದು ನುಲಿಯುತ್ತಾ

" ಮರೆತು ಬಿಡುತ್ತೀರೇನೋ " ಎಂದಳು.

" ಉಂಟೇ ? ಎಂದಿಗೆ ನಿನ್ನ ಮರೆತೇನು ? "

" ಯಾವಾಗ ಬರುವಿರಿ ? "

" ಇಂದೇ ಸಂಜೆಗೆ ! "

" ಸಂಜೆಗೆ ! "

" ಹೂ ! ಏಕೆ ಸಾಧ್ಯವಿಲ್ಲವೇ ? "

" ಮನೆಯಲ್ಲಿ ಬಿಡುತ್ತಾರೆಯೋ ? "

" ಮೈಸೂರಿಗೆ ಹೋಗುತ್ತೇನೆಂದು ಹೇಳಿ ಬರುತ್ತೇನೆ. "

" ಬರುವಾಗ ನನಗೇನು ತರುವಿರಿ ? "

" ನಿನಗೇನು ಬೇಕು ಹೇಳು. "

" ನನಗೆ.... "

" ತಡೀ ಮುನಿ ...ಮೈಸೂರಿಗೆ ಹೋಗಿಯೇ ಬರೋಣ. ಅಲ್ಲಿಯೇ ನಿನಗೇನು ಬೇಕೋ ತೆಗೆದುಕೊಳ್ಳುವೆಯಂತೆ "

" ಈ ಮಾತು ದಿಟವೇ ? "

" ನಾನು ಸುಳ್ಳು ಹೇಳುವೆನೇ ? "

" ಯಾವ ಗಾಡೀಗೆ. "

" ಮಧ್ಯಾಹ್ನದ ಗಾಡಿಗೆ. "

" ಅಷ್ಟು ಬೇಗ .... ಈಗಲೇ ಒಂಭತ್ತಾಯಿತು. "

" ಆಗಲಿಬಿಡು ನಾನು ಬರುವ ಹೊತ್ತಿಗೆ ನೀನು ಸಿದ್ಧವಾಗಿರು."

"ನನ್ನ ಮರೆತೇ ಬಿಟ್ಟೆಯೇನಯ್ಯಾ?"

ಎಂದು ನಗುತ್ತ ರಾಜು ಕೇಳಿದ.

"ನಿನ್ನ ಮರೆತರುಂಟೇ? ನೀನು ಹೊರಟುಬಿಡು."

"ಯಜಮಾನನ ಅಪ್ಪಣೆಯಾದ ಮೇಲೆ ಹೊರಡದೆ ಇರುವುದಕ್ಕಾಗುತ್ತದೆಯೇ?... ಲಕ್ಷ್ಮಿ...."

"ಬರುವ ಹಾಗಿದ್ದರೆ ಅವಳನ್ನು ಕರೆದುಕೋ."

"ಖಂಡಿತ ಬರುವಿರಷ್ಟೆ?"

"ನನ್ನಾಣೆ ಬರುವೆ"

ಎಂದು ಭರವಸೆಕೊಟ್ಟು ರಾಜು ಜತೆ ಹೊರಟುಬಿಟ್ಟ.

ಮೂರು ದಿವಸ ಕಳೆದ ಮೇಲಾದರೂ ಗಂಡ ಮನೆಗೆ ಬಂದುದನ್ನು ಕಂಡು ಜಾನಕಿ ಹಿರಿಹಿರಿ ಹಿಗ್ಗಿದಳು. ಅವಳ ಮನಸ್ಸು ದುಗುಡ, ದುಃಖ, ಕೋಪದಿಂದ ತಪ್ತವಾಗಿದ್ದರೂ ತೋರಗೊಡದೆ ಗಂಡನನ್ನು ಸ್ವಾಗತಿಸಿದಳು.

"ಮಕ್ಕಳೆಲ್ಲಿ?"

"ಸ್ಕೂಲಿಗೆ ಹೋಗಿದ್ದಾರೆ. ಮೂರು ದಿನ ಎಲ್ಲಿಗೆ ಹೋಗಿದ್ದಿರಿ."

"ಡ್ರೈವರ್ ಹೇಳಲಿಲ್ಲವೇ?"

"ಗಾಂಧೀ ಬಜಾರಿನಲ್ಲಿಳಿದು ಹೋದಿರೆಂದು ಹೇಳಿದ."

"ಯಶವಂತಪುರದಲ್ಲಿ ಒಂದು ಭಾರಿ ಆಸ್ತಿ ಮಾರಾಟಕ್ಕೆ ಬಂದಿದೆ. ಅದನ್ನು ನೋಡಿ ಬರುವ ಎಂದು ಹೋದೆ. ಯಜಮಾನ ಬಿಡದೆ ನನ್ನ ಅಲ್ಲಿಯೇ ಮೂರು ದಿನ ಇಟ್ಟುಕೊಂಡ."

"ಹೀಗೆ ನೀವು ಹೇಳದೆ ಕೇಳದೆ ನಿಂತರೆ ನನ್ನ ಗತಿಯೇನು?— ನಾನು ಏನೆಂದು ಭಾವಿಸಬೇಕು."

"ನಿನಗೇನು ಕಡಿಮೆಯಾಗಿರುವುದು?"

"ನಾನು ಮದುವೆಯಾದದ್ದು ಈ ಆಸ್ತಿಯನ್ನಲ್ಲ."

"ನಾನು ಮನೆಯಲ್ಲಿಯೇ ಸದಾ ಇರುವುದಕ್ಕಾಗುತ್ತದೆಯೇ?"

"ಹಾಗೆ ನಾನು ಹೇಳಿದೆನೇ? ನನಗೆ ಒಂದು ಮಾತು ತಿಳಿಸಿ ನೀವು ಹೋದರೆ ಆತಂಕವಿರುವುದಿಲ್ಲ."

“ ಇನ್ನು ಮೇಲೆ ಹಾಗೇ ಮಾಡುತ್ತೇನೆ ಬಿಡು. ಇನ್ನೊಂದು ವಿಷಯ — ನನ್ನ ಸಾಮಾನು ಸೂಟ್‌ಕೇಸಿಗೆ ಹಾಕು.”

“ ಏಕೆ ” ಎಂದು ಗಾಬರಿಯಾಗಿ ಜಾನಕಿ ಕೇಳಿದಳು.

“ ಸ್ವಲ್ಪ ಮೈಸೂರಿಗೆ ಹೋಗಿಬರಬೇಕಾಗಿದೆ. ”

“ ಇವತ್ತೇ ಹೊರಡಬೇಕೇ ? ”

“ ಹೂ ! ಆ ಆಸ್ತಿ ವಿಷಯ ನಿರ್ಧರಿಸಿಬಿಡಬೇಕು. ಅವನ ತಮ್ಮ ಒಬ್ಬ ಮೈಸೂರಿನಲ್ಲಿದ್ದಾನಂತೆ. ಪತ್ರಕ್ಕೆ ಅವನದು ಒಂದು ರುಜು ಬೀಳಬೇಕು.”

“ ಈಗ ಆ ಆಸ್ತಿಕೊಳ್ಳದಿದ್ದರೆ ಏನು ನಷ್ಟ? ”

“ ಹ..ಚ್ಚಿ. ಲಕ್ಷಾಂತರ ರೂಪಾಯಿ ಬೆಲೆಬಾಳುವ ಆಸ್ತಿ ಕವಡೆ ಬೆಲೆಗೆ ಸಿಕ್ಕುವಾಗ ಬಿಟ್ಟರೆ ನನ್ನ ಮೂರ್ಖ ಎಂದಾರು ... ಡ್ರೈವರ್ ಇದ್ದಾನೆಯೇ? ”

“ ಇದ್ದಾನೆ ”

“ ಅವನಿಗೂ ಇಲ್ಲೇ ಊಟಕ್ಕೆ ಹಾಕಬಿಡು. ನಾನು ಬ್ಯಾಂಕಿಗೆ ಹೋಗಿ ಅಲ್ಲಿಂದಲೇ ಸ್ಟೇಷನ್ನಿಗೆ ಹೋಗುತ್ತೇನೆ.”

ಜಾನಕಿ ಅವನ ಆಜ್ಞೆ ಪಾಲಿಸಿದಳು.

ಚಂದ್ರೂ ಜೇಬಿನಲ್ಲಿ ಚೆಕ್ ಪುಸ್ತಕ ಹಾಕಿಕೊಂಡು ಬ್ಯಾಂಕಿಗೆ ಹೋಗಿ ಎರಡು ಸಾವಿರ ರೂಪಾಯಿ ತೆಗೆದುಕೊಂಡು, ರಾಜುವನ್ನು ಕರೆದುಕೊಂಡು ಮುನಿರತ್ನಳ ಮನೆಗೆ ಹೋದ. ಅವನು ಬರುವ ವೇಳೆಗೆ ಮುನಿ, ಲಕ್ಷ್ಮೂ ಹೊರಟು ಸಿದ್ಧರಾಗಿದ್ದರು. ಅವರನ್ನು ಕರೆದು ಕೊಂಡು ಸ್ಟೇಷನ್ನಿಗೆ ಹೋದ.

ರೈಲಿನಲ್ಲಿ ಕುಳಿತ ಮೇಲೆ ಡ್ರೈವರನ್ನು ಕರೆದು ಅವನ ಕೈಗೆ ಐವತ್ತುರೂಪಾಯಿ ಹಾಕಿ

“ ಮನೆಯಲ್ಲಿ ಕೇಳಿದರೆ ಒಬ್ಬರೆ ಹೋದರು ಎಂದು ಹೇಳು. ನೀನು ಇನ್ನು ಹೋಗು.”

ಎಂದು ಹೇಳಿದ.

೭

ಚಂದ್ರೂ ಪಾಲಿಗೆ ಹಣ ನೀರಿಗಿಂತ ಕಡೆಯಾಗುತ್ತ ಬಂತು.... ಮುನಿರತ್ನಳ ದಯೆಯಿಂದ. ಅವಳಲ್ಲಿ ಚಂದ್ರೂ ತಾದಾತ್ಮ್ಯ ಹೊಂದಿ ಬಿಟ್ಟ. ಅವನ ಹಣವೂ ಅವಳಲ್ಲಿ ತಾದಾತ್ಮ್ಯ ಹೊಂದಿತು. ಅವನ ಸಣ್ಣಪುಟ್ಟ ಆಸ್ತಿಗಳು ಕರಗಿ, ಮುನಿರತ್ನಳಿಗೆ ಮೈಸೂರಿನಲ್ಲಿ ಒಂದು ಮನೆಯಾಯಿತು, ಒಡವೆ ವಸ್ತ್ರಗಳಾದುವು, ಬ್ಯಾಂಕಿನಲ್ಲಿ ಒಂದು ಅಕೌಂಟಾಯಿತು.

ಜಾನಕಿಯ ಮುಂದೆ ಚಂದ್ರೂ ಇನ್ನು ಮುಚ್ಚುಮರೆ ಮಾಡ ಬೇಕಾಗಿರಲಿಲ್ಲ. ಅವನ ಪ್ರಣಯ ಪ್ರಸಂಗ ಲೋಕಕ್ಕೇ ತಿಳಿದಿತ್ತು. ಚಂದ್ರೂ ಸ್ವಭಾವವರಿತ ಜಾನಕಿ ಅವನು ಇಂದಲ್ಲ ನಾಳೆ ದಾರಿಗೆ ಬರಬಹುದೆಂದು ನಿರೀಕ್ಷಿಸಿದಳು. ಆದರೆ ಆಸ್ತಿಗಳು ಮಾಯವಾಗು ತ್ತಿದ್ದುದು ಅವಳಿಗೆ ಭಯವನ್ನುಂಟುಮಾಡಿದ್ದವು.

ಚಂದ್ರೂ ಮೈಸೂರಿಗೆ ಹೋಗಿ ಮುನಿರತ್ನಳ ಮನೆಯಲ್ಲಿಯೇ ಬೀಡುಬಿಟ್ಟ. ಹಣಕ್ಕೆ ಕೊರತೆಬಂದಾಗ ಬೆಂಗಳೂರಿಗೆ ಬಂದು ಮನೆಗೆ ಮುಖತೋರಿಸುತ್ತಿದ್ದ.

ಜಾನಕಿ ಕೊರಗಿ ಕೊರಗಿ ಕಡ್ಡಿಯಾಗುತ್ತ ಬಂದಳು ಈ ವಿಷಯ ರಾಜುವಿನಲ್ಲಿ ಪ್ರಸ್ತಾಪಿಸಿ ಅವನ ಸಹಾಯದಿಂದ ಈ ಹೀನ ಸಂಬಂಧ ಕಡಿದು ಹಾಕಬೇಕೆಂದು ನಿರ್ಧರಿಸಿದಳು.

ಡ್ರೈವರ ಜತೆ ರಾಜು ಅನುಮಾನಿಸುತ್ತಲೇ ಬಂದ. ಜಾನಕಿ ಯನ್ನು ಕತ್ತೆತ್ತಿನೋಡುವ ಧೈರ್ಯವೂ ಅವನಿಗೆ ಒರಲಿಲ್ಲ ಎದುರಿಗೆ ಮೌನವಾಗಿ ಕುಳಿತ ರಾಜುವನ್ನು ಅವಳೇ ಮಾತನಾಡಿಸಿದಳು.

"ಸ್ನೇಹಿತರೊಂದ್ರೆ ಕಷ್ಟಕ್ಕೆ ಸುಖಕ್ಕೆ ಆಗುವವರು ಅಲ್ಲವೇ ರಾಜು ಅವರೇ."

"ಹೌದಮ್ಮಾ."

"ಸ್ನೇಹಿತರು ಸ್ನೇಹಿತರನ್ನು ಸನ್ಮಾರ್ಗದಲ್ಲಿ ನಡಸಿಕೊಂಡು ಹೋಗ ಬೇಕಾದುದು ಅವರ ಕರ್ತವ್ಯವಲ್ಲವೇ?"

"ಹೌದು."

“ ಯಜಮಾನರು ನಿಮಗೆ ಯಾವ ಅಪರಾಧವನ್ನೂ ಮಾಡಿಲ್ಲ.”

“ ಅಪರಾಧವೆಲ್ಲಿಂದ ಬಂತಮ್ಮಾ. ಅವನು ಚಿನ್ನದಂಥ ಮನುಷ್ಯ.”

“ ಆ ಚಿನ್ನವನ್ನು ನೀವು ರೋಲ್ಡ್‌ಗೋಲ್ಡ್ ಮಾಡಿಬಿಟ್ಟಿರಿ ”

“ ನಾನೇನು ಮಾಡಿದೆನಮ್ಮಾ.”

“ ನನ್ನ ಏಕೆ ಕೇಳುವಿರಿ. ನಿಮ್ಮ ಮನಸ್ಸನ್ನೇ ಕೇಳಿಕೊಳ್ಳಿ. ಆ ಹೆಮ್ಮಾರಿ ಪರಿಚಯ ಅವರಿಗೆ ಮಾಡಿಸಿದವರು ಯಾರು ? ”

“ ಖಂಡಿತವಾಗಿ ನಾನಲ್ಲಮ್ಮಾ.”

“ ನನಗೆಲ್ಲಾ ಗೊತ್ತು .... ಸುಳ್ಳೇಕೆ ಹೇಳುವಿರಿ. ಹೋಗಲಿ, ಚೆಲ್ಲಿ ಹೋದ ಹಾಲು ನೆನಸಿಕೊಂಡು ಅತ್ತರೆ ಪ್ರಯೋಜನವಿಲ್ಲ. ಈಗಾಗಿರುವ ಅವಿವೇಕವನ್ನು ತಿದ್ದುವುದಕ್ಕಾದರೂ ಸಹಾಯಮಾಡುವಿರಾ? ”

“ ಹೇಳಿ ತಾಯಿ, ನೀವು ಹೇಳಿದಂತೆ ಮಾಡುವುದಕ್ಕೆ ನಾನು ಸಿದ್ಧನಾಗಿದ್ದೇನೆ.”

“ ಅವಳ ಸಹವಾಸ ಬಿಡಿಸಿ, ಅವರನ್ನು ಊರಿಗೆ ಕರದುಕೊಂಡು ಬನ್ನಿ. ಅವಳು ದುಡ್ಡೋ ಕಾಸೋ ಕೇಳಿದರೆ ಕೊಡುವುದಕ್ಕೆ ನಾನು ಸಿದ್ಧಳಾಗಿದ್ದೇನೆ .ನಿಮಗೂ ಏನು ಬೇಕೋ ತೆಗೆದುಕೊಳ್ಳಿ. ಗಂಡ ಹೆಂಡತಿಯರನ್ನು ಅಗಲಿಸಬೇಡಿ.”

ರಾಜುವಿನ ಕರುಳು ಚುರ್ ಎಂದಿತು. ಅವನಿಗೆ ಮುಖ ತಗ್ಗಿಸು ವಂತಾಯಿತು.

“ ನಾನು ಏನು ಮಾಡಲಮ್ಮಾ.”

“ ಮೈಸೂರಿಗೆ ಹೋಗಿ ಅವರನ್ನು ಕರೆದುಕೊಂಡು ಬನ್ನಿ.”

“ ಅವನು ಬರದಿದ್ದರೆ .... ”

“ ನೀವು ಹೋದರೆ ಬಂದೇ ಬರುತ್ತಾರೆ.”

“ ಆಗಲಿ ಪ್ರಯತ್ನಿಸುತ್ತೇನೆ.”

ಜಾನಕಿ ಅವನ ಖರ್ಚು ವೆಚ್ಚಕ್ಕೆ ನೂರು ರೂಪಾಯಿ ಕೈಗೆ ಹಾಕಿದಳು.

ಬಹಳ ದಿನಗಳ ಮೇಲೆ ಬಂದ ಗೆಳೆಯನನ್ನು ಚಂದ್ರೂ ಆದರದಿಂದ

ಅಪ್ಪಿದ. ಅವನ ಆತಿಥ್ಯವನ್ನು ಚಂದ್ರೂ, ಮುನಿ ಬಹಳ ಆಸ್ಥೆಯಿಂದ ನೋಡಿಕೊಂಡರು.

ಒಂದು ದಿನ ಸಮಯ ಸಾಧಿಸಿ, ಮುನಿ ಪೇಟೆಗೆ ಹೋಗಿದ್ದಾಗ ಚಂದ್ರುವನ್ನು ಹೊರಗೆ, ಕನ್ನಂಬಾಡಿ ರಸ್ತೆಯಲ್ಲಿ ವಾಕಿಂಗ್ ಕರೆದು ಕೊಂಡು ಹೋದ. ರಾಜುವಿನ ಗಂಭೀರವದನ ನೋಡಿ ಚಂದ್ರು

"ಏಕೆ ಮಿತ್ರಾ, ಬಹಳ ವಿಚಾರಮಾಡುತ್ತಿರುವೆ. ತಾಪತ್ರಯ ವಾಗಿದೆಯೇನು? ಖರ್ಚಿಗೆ ಹಣ ಬೇಕಾಗಿತ್ತೇ?"

"ಇಲ್ಲ ಚಂದ್ರೂ. ನಿನ್ನಲ್ಲಿ ಒಂದು ಮಹತ್ವದ ವಿಷಯ ಮಾತ ನಾಡಬೇಕಾಗಿತ್ತು."

"ಅದೇನಪ್ಪ ಅಂಥ ರಾಜಕಾರ್ಯ!"

"ನೀನು ಸುಖವಾಗಿರುವೆಯಾ?"

"ಸುಖ! — ಸ್ವರ್ಗಸುಖದಲ್ಲಿರುವೆ!"

"ನಿನ್ನಂಥವನಿಗೆ ಸುಖನೀಡುವ ಯೋಗ್ಯತೆ ಮುನಿಗಿದೆಯೇ?"

"ಯಾಕಿರಬಾರದು?"

"ಅವಳು ನೀಡುವ ಸುಖವನ್ನೇ ಪರಮಸುಖವೆಂದು ಭಾವಿಸಿರು ವೆಯಾ?"

"ಒಣ ತರ್ಕವೇಕೆ? ನನ್ನ ಮನಸ್ಸು – ದೇಹ ತುಂಬಿದ್ದಾಳೆ ಮುನಿ."

"ನಾನು ನಿನ್ನ ಮಿತ್ರನಷ್ಟೇ!"

"ಸಂದೇಹವೇನು?"

"ನಾನು ಒಂದು ಮಾತು ಸ್ಪಷ್ಟವಾಗಿ ಹೇಳಿದರೆ ನೀನು ಅಸಮಾಧಾನಮಾಡಿಕೊಳ್ಳುವುದಿಲ್ಲವಷ್ಟೆ?"

"ಇಲ್ಲಪ್ಪಾ — ಹೇಳು."

"ನಿನ್ನಂಥ ವಿವೇಕಿ — ಸುಸಂಸ್ಕೃತ ನಡಸುತ್ತಿರುವ ಬಾಳುವೆ ಯಾರಿಗೆ ಪ್ರಿಯ?"

"ಯಾರಿಗೆ ಪ್ರಿಯವಾದರೆಷ್ಟು ಬಿಟ್ಟರೆಷ್ಟು? ನನಗೆ ಪ್ರಿಯ ವಾಗಿದೆ."

" ಮುನಿಯಳನ್ನು ಕಣ್ತುಂಬ ನೋಡಿರುವೆಯಾ ? "

" ಆ ಪ್ರಶ್ನೆ ನೀನು ನನ್ನ ಕೇಳುವೆಯಾ ?"

" ಹೌದು ಕೇಳುವೆ. ನೀಚ ಕಾಮು ಲಾಲಸೆಗಳಿಂದ ಕೂಡಿದ ಆ ಪಶು ಒಂದು ಹೆಣ್ಣೇ. ಹೆಣ್ಣಿನ ಗಾಂಭೀರ್ಯ, ಮಾರ್ದವ, ಲಾಲಿತ್ಯ ಅವಳಲ್ಲಿ ಒಂದಂಶವಾದರೂ ಇದೆಯೇ ? "

" ಅವಳಲ್ಲಿ ಏನಿದೆಯೆಂಬುದನ್ನು ನೀನೇನು ಬಲ್ಲೆ— ನಾನು ಬಲ್ಲೆ."

" ನಾನೇನೂ ಯೋಗ್ಯನಲ್ಲ ಚಂದ್ರೂ — "

" ಅದೇಕೆ ಹಾಗೆ ಹೇಳುವೆ "

" ಮುಂದೆ ಕೇಳು — ನಿನ್ನ ಹೆಂಡತಿ ನನ್ನ ತಾಯಿ ಸಮಾನ. ನಾನು ಹಲವು ಹೆಣ್ಣುಗಳ ಸಹವಾಸಮಾಡಿರುವೆ. ಆದರೆ ಗೆಳೆಯನ ಹೆಂಡತಿಯ ಮೇಲೆ ನೋಟಬೀರುವ ದೌರ್ಜನ್ಯ ತೋರಿಲ್ಲ. "

" ನಿನ್ನ ಶೀಲ ಯಾರು ಶಂಕಿಸಿದರಯ್ಯಾ. ಇಲ್ಲದ ಸಲ್ಲದ ಸಮಸ್ಯೆಗಳನ್ನೇತಕ್ಕೆ ತಂದೊಡ್ಡುವೆ ?"

" ಆಕೆ ನೆನಪಾಯಿತು. ಆಕೆಯನ್ನು ನೋಡಿದರೆ ಮಹಾಲಕ್ಷ್ಮಿಯನ್ನು ನೋಡಿದಂತಾಗುತ್ತದೆ. ಎಂಥವನಿಗಾದರೂ ಭಕ್ತಿ ಹುಟ್ಟುತ್ತದೆ. ಜಾನಕಮ್ಮನವರಂಥ ಹೆಂಡತಿ ಸಿಕ್ಕಿರುವುದು ನಿನ್ನ ಪೂರ್ವಾರ್ಜಿತ ಪುಣ್ಯ."

" ಅವಳು ಬಹಳ ಒಳ್ಳೆಯವಳು."

" ಅವರನ್ನೇಕೆ ವೃಥಾ ನೋಯಿಸುತ್ತಿರುವೆ. ಈ ಕುಲಟೆ ಅವರ ಕಾಲು ತೊಳೆದ ನೀರು ಕುಡಿಯುವುದಕ್ಕಾದರೂ ಅರ್ಹಳೇ ? "

" ಅಲ್ಲ — ಖಂಡಿತವಾಗಿಯೂ ಅಲ್ಲ."

" ಇವಳಲ್ಲಿ ಸೌಂದರ್ಯವಿದೆಯೇ — ಗುಣವಿದೆಯೇ — ಶೀಲವಿದೆಯೇ — ಸಂಸ್ಕೃತಿ ಇದೆಯೇ ?"

" ಒಂದೂ ಇಲ್ಲ."

" ಹಾಗಾದರೆ .... ?"

" ಏನು ಎಂದು ಹೇಳಲಿ ರಾಜು. ನೀನು ಹೇಳುವುದನ್ನೆಲ್ಲಾ

ಒಪ್ಪಿದೆ ನಾನು ಜಾನಕಿಗೆ ಸರಿಯಾದ ಗಂಡನಲ್ಲವೆಂಬುದನ್ನು ಬಲ್ಲೆ. ಆದರೆ ಮುನಿಯನ್ನು ಬಿಡಲಾರೆ."

"ಅವಳಲ್ಲಿ ಏನಿದೆಯೆಂದು ಹೀಗೆ ಮನಸೋತಿರುವೇ ?"

"ರಾಜೂ — ನಾನು ಹೇಳುವುದನ್ನು ಲಕ್ಷ್ಯವಿಟ್ಟು ಕೇಳು. ಮುನಿ ಬೀದಿಯ ಹೆಣ್ಣು. ಅದೊಂದು ಪಾಪದ ಕೊಡ; ಜಾನಕಿ ಪುಣ್ಯದ ಅರ್ಘ್ಯಪಾತ್ರೆ. ಆದರೆ ಮುನಿಯನ್ನು ನಿನ್ನ ಕಣ್ಣಿಂದ ನೋಡಬೇಡ— ನನ್ನ ಕಣ್ಣಿಂದ ನೋಡು

"ನಿನ್ನ ಕಣ್ಣಿಗೆ ಹೇಗೆ ಕಂಡುಬರುತ್ತಾಳೆ."

"ಸುಲಭ ವಿವರಣೆಗೆ ಸಿಕ್ಕುವ ವಿಷಯವಲ್ಲ ಅದು ಮನುಷ್ಯನಲ್ಲಿ ರಾಜಸ ತಾಮಸ ಎರಡು ಅಂಶಗಳೂ ಇರುವವಷ್ಟೇ ?"

"ಇರುತ್ತವೆ."

"ರಾಜಸ ಪ್ರಧಾನವಾದರೆ ಅವನು ಯೋಗ್ಯನಾಗುತ್ತಾನೆ, ತಾಮಸ ಪ್ರಧಾನವಾದರೆ ಅವನು ಅಯೋಗ್ಯನಾಗುತ್ತಾನೆ."

"ನಿಜ."

"ನನ್ನಲ್ಲಿ ತಾಮಸ ಪ್ರಧಾನ. ಜಾನಕಿಯಲ್ಲಿ ರಾಜಸಪ್ರಧಾನ. ಸತ್ವಪ್ರಧಾನವೆಂದು ಬೇಕಾದರೂ ಹೇಳು. ತಾಮಸಕ್ಕೆ ಬೇಕು, ತಾಮಸದ ಪೋಷಣೆ. ಅದಕ್ಕೇ ನನಗೂ ಮುನಿಗೂ ಚೆನ್ನಾಗಿ ಕೂಡುವುದು."

ರಾಜು ಬಾಯಲ್ಲಿ ಮಾತು ಹೊರಡಲಿಲ್ಲ. ಈ ಮೋಹಾಂಧತೆ ತೊಲಗುವವರೆಗೆ ಯಾರ ಪ್ರಯತ್ನವೂ ಸಫಲಿಸುವುದಿಲ್ಲವೆಂಬುದನ್ನು ಅವನರಿತ. ಮುನಿಯ ಪರಿಚಯ ಮಾಡಿಕೊಟ್ಟು ತಾನೆಂಥ ಅಪರಾಧ ಮಾಡಿದೆ ಎಂದು ಮರುಗಿದ. ಆದರೇನು ? ಎಲ್ಲಾ ಕೈ ಮಿಂಚಿ ಹೋಗಿತ್ತು.

ಮನೆಗೆ ಹಿಂದಿರುಗುವಾಗ ರಾಜು ಕೇಳಿದ

"ಬೆಂಗಳೂರಿಗೆ ಯಾವಾಗ ಬರುವೆ ?"

"ಯಾವಾಗಲಾದರೂ ಬರುವೆ."

ರಾಜು ಹೆಚ್ಚು ದಿನ ಮೈಸೂರಿನಲ್ಲಿ ನಿಲ್ಲಲಿಲ್ಲ. ಮಾರನೆಯ

ದಿನವೇ ಹೊರಟು ಬೆಂಗಳೂರಿಗೆ ಬಂದ. ಕೂಡಲೆ ಜಾನಕಿಯನ್ನು ಕಂಡು ಮೈಸೂರಿನ ವಿದ್ಯಮಾನವನ್ನು ಕೂಲಂಕಷವಾಗಿ ಬಣ್ಣಿಸಿದ.

ಜಾನಕಿ ತಲೆಯ ಮೇಲೆ ಕೈ ಹೊತ್ತು ಕುಳಿತಳು. ಅವಳಿಗೆ ದಿಕ್ಕೇ ತೋರದಂತಾಯಿತು.

೮

ಆಸ್ತಿ ದಿನೇ ದಿನೇ ಕರಗುತ್ತಿತ್ತು. ಹೀಗೇ ಬಿಟ್ಟುಕೊಂಡು ಹೋದರೆ ಯಜಮಾನರು ಮಕ್ಕಳ ಕೈಗೆ ಚಿಪ್ಪು ಕೊಡುವುದು ಖಂಡಿತ ವೆಂದು ಜಾನಕಿಗೆ ಭಾಸವಾಯಿತು. ಕಾಗದ ಬರೆದು ತನ್ನ ಅಣ್ಣನನ್ನು ಕರೆಸಿಕೊಂಡಳು. ಶಿವಮೊಗ್ಗೆಯಲ್ಲಿ ದೊಡ್ಡ ವಕೀಲನಾಗಿದ್ದ ಅಣ್ಣ ಇದಕ್ಕೆ ಏನಾದರೂ ಪರಿಹಾರ ಹೇಳಬಹುದೆಂದು ಭಾವಿಸಿದಳು.

ವಕೀಲ ಗುರುರಾಜಾರಾಯರು ತಂಗಿಯ ಕರುಣಾರ್ದ್ರ ಕಥೆ ಕೇಳಿದರು.

" ಅವರು ದಾರಿಗೆ ಬರುವ ಸಂಭವವಿಲ್ಲವೇ ಜಾನಕಿ.? "

" ರಾಜು ಅವರ ಪ್ರಯತ್ನವೇ ನಿಷ್ಫಲವಾದ ಮೇಲೆ ಇನ್ನು ಯಾರು ಏನು ಮಾಡುವುದಕ್ಕಾಗುತ್ತದೆ "

" ನೀನು ಗಂಡನ ಕಡೆಗೋ ಮಕ್ಕಳ ಕಡೆಗೋ ?

" ಇದೇನು ಹೀಗೆ ಕೇಳುತ್ತಿರುವೆ ಗುರಣ್ಣ ? "

" ಕಾರಣವಿದೆ. ಮಕ್ಕಳ ಭವಿಷ್ಯ ನಿರ್ಧಾರವಾಗಬೇಕಾದರೆ ನೀನು ಮನಸ್ಸು ಗಟ್ಟಿಮಾಡಬೇಕು.

" ಏನು ಮಾಡಬೇಕು. ಅವರನ್ನು ಬಿಟ್ಟು ಬಿಡಬೇಕೇ ? "

" ಕೆಲವುಕಾಲ ಬಿಡಬೇಕಾದ ಪ್ರಸಂಗವೂ ಬರಬಹುದು. "

" ನನಗೆ ಆಸ್ತಿ ಬೇಕಿಲ್ಲ ಅಣ್ಣಾ. ಅವರು ಮನೆಗೆ ಬಂದರೆ ಸಾಕು. "

" ಅವರು ಮನೆಗೆ ಬರುವವೇಳೆಗೆ ಆಸ್ತಿಯಲ್ಲಿ ಒಂದು ಕುರುಡು ಕವಡೆಯೂ ಉಳಿದಿರುವುದಿಲ್ಲ. ಮಕ್ಕಳನ್ನು ಭಿಕ್ಷಾನ್ನಕ್ಕೆ ಕಳುಹಿಸುವೆ ಯೇನು ? "

ಜಾನಕಿ ಝುಝರ್ಝರಿತಳಾದಳು.

“ ನನಗೆ ಪೂರ್ತಿ ‘ ಪವರ್ ಆಫ್ ಅಟಾರ್ನಿ ’ ಕೊಡುವ ಹಾಗಿದ್ದರೆ ಈ ವ್ಯವಹಾರದಲ್ಲಿ ನಾನು ಕೈಹಾಕಲು ಸಾಧ್ಯ. ನಾನು ಮಾಡಿದುದಕ್ಕೆ ನೀನು ನಾಳೆ ಅವನ ಬೇಳ್ವೆಮಾತು ಕೇಳಿಕೊಂಡು ಅಡ್ಡಿಬರಬಾರದು. ”

“ ಏನು ಮಾಡುವೆ ? ”

“ ಅದನ್ನು ಹೇಳಲಾರೆ. ಆಸ್ತಿಯನ್ನು ಮಕ್ಕಳಿಗಾಗಿ ಕಾಪಾಡುವುದು ನನ್ನ ಮೊದಲನೆಯ ಕರ್ತವ್ಯ. ಅವರ ಖರ್ಚಿಗೆ ಬೇಕಾಗುವಷ್ಟು ಹಣವನ್ನೂ ಕೊಡೋಣ. ಆದರೆ ಈ ಶನಿಸಂಬಂಧ ತಪ್ಪಿಸಲೇಬೇಕು. ”

“ ನಿನಗೆ ತಿಳಿದಂತೆ ಮಾಡಪ್ಪ. ಅವರಿಗೆ ಯಾವ ಹಿಂಸೆಯೂ ಆಗದಿರಲಿ. ”

ಎಂದಳು.

ಗುರುರಾಜಾರಾಯರು ತಂಗಿಯ ಪರವಾಗಿ ಚಂದ್ರನಿಗೆ ಒಂದು ನೋಟೀಸ್ ಕೊಟ್ಟರು. ಚಂದ್ರೂ ಅದನ್ನೋದಿಕೊಂಡು ತಿರಸ್ಕಾರದಿಂದ ಹರಿದೊಗೆದ. ಒಂದು ತಿಂಗಳು ಕಾದರೂ ನೋಟೀಸಿಗೆ ಉತ್ತರ ಬಾರದಿರಲು ಗುರುರಾಜಾರಾಯರು ಕೋರ್ಟಿಗೆ ಒಂದು ಅಪ್ಲಿಕೇಷನ್ ಸಲ್ಲಿಸಿದರು. ಅದರಲ್ಲಿ ಚಂದ್ರನಿಗೆ ಹುಚ್ಚುಹಿಡಿದಿದೆಯೆಂದೂ, ಅವನು ಒಬ್ಬಳು ದುಷ್ಟಳ ಸಹವಾಸದಲ್ಲಿ ಪಿತ್ರಾರ್ಜಿತ ಆಸ್ತಿಯನ್ನು ಪೋಲು ಮಾಡುತ್ತಿದ್ದಾನೆಂದೂ, ಮೈನರ್ ಮಕ್ಕಳ ಹೆಸರಿನಲ್ಲಿ ನಿವೇದಿಸಿದರು.

ಚಂದ್ರನ ಮೇಲೆ ಅರೆಸ್ಟ್‌ವಾರೆಂಟ್ ಹೊರಟಿತು. ಅವನನ್ನು ಪೋಲೀಸಿನವರು ಕರೆದುಕೊಂಡು ಬಂದು ನ್ಯಾಯಾಸ್ಥಾನದಲ್ಲಿ ನಿಲ್ಲಿಸಿದರು. ತನ್ನ ಪರ ತಾನೇ ವಾದಕ್ಕೆ ನಿಂತ.

ಗುರುರಾಜಾರಾಯರು ಚಂದ್ರನನ್ನು ಹುಚ್ಚನೆಂದು ಸಿದ್ಧಮಾಡಿಕೊಡಬೇಕಾಗಿತ್ತು. ಅವರು ಮಾನಸಿಕ ಆಸ್ಪತ್ರೆಯ ಡಾಕ್ಟರುಗಳನ್ನು, ದಕ್ಷರಾದ ಮನಃಶಾಸ್ತ್ರಜ್ಞರನ್ನು ಸಾಕ್ಷಿಹೇಳಲು ಕರೆದಿದ್ದರು.

ಪ್ರತಿಪಕ್ಷದ ಸವಾಲುಗಳಿಗೆ ಚಂದ್ರ ಸರಿಯಾದ ಉತ್ತರಗಳನ್ನಿತ್ತ. ಅವನೇ ಪಾಟಿ ಸವಾಲಿಗೆ ನಿಂತಾಗ ಗುರುರಾಜಾರಾಯರ ಸಾಕ್ಷಿಗಳು

ಕುಸಿದುಬಿದ್ದರು. ಚಂದ್ರೂ ಹುಚ್ಚನೆಂದು ಸಿದ್ಧಮಾಡಿಕೊಡುವುದು ಯಾರಿಗೂ ಸಾಧ್ಯವಾಗಲಿಲ್ಲ.

ಗುರುರಾಜಾಚಾರಾಯರು ನ್ಯಾಯಾಧೀಶರನ್ನು ಕಂಡು ಪರಿಸ್ಥಿತಿಯನ್ನು ವಿವರಿಸಿದರು. ಜಡ್ಜ್‌ಮೆಂಟಿನ ದಿನ ನ್ಯಾಯಾಧೀಶರು ಚಂದ್ರುವನ್ನು ಹುಚ್ಚನೆಂದು ಸಾರಿ, ಅವನ ಸಮಸ್ತ ಆಸ್ತಿಯ ಹಕ್ಕು ಬಾಧ್ಯತೆಯನ್ನು ಜಾನಕಿಗೆ ವಹಿಸಿದರು.

ಚಂದ್ರೂ ಕೆರಳಿ ಕೆಂಡವಾದ. ಹೆಂಡತಿಯ ಮುಖ ಕೂಡ ನೋಡದೆ ಮಾನಸಿಕ ಆಸ್ಪತ್ರೆಗೆ ಪೋಲೀಸಿನವರ ಜತೆ ಹೋದ.

ತನಗೆ ಬಂದೊದಗಿದ ಆಪತ್ತು ಚಂದ್ರುವಿನ ಮನೋದಾರ್ಢ್ಯವನ್ನು ಅಲುಗಿಸಿತು. ಆಸ್ಪತ್ರೆಯಲ್ಲಿ ಮನಸ್ವೀ ವರ್ತಿಸ ತೊಡಗಿದ. ಡಾಕ್ಟರುಗಳು, ನೌಕರರು ಅವನನ್ನು ಹುಚ್ಚನಂತೆ ಕಾಣತೊಡಗಿದರು. ಅವನ ಗಲಭೆ ಹೆಚ್ಚಿದರೆ ಚೆನ್ನಾಗಿ ಬಡಿದು ಅವನನ್ನು ಏಕಾಂತವಾಸಕ್ಕೆ ತಳ್ಳುತ್ತಿದ್ದರು. ಅವನ ಊಟ ಉಡುಗೆಗೆ ಎಲ್ಲಾ ಸೌಕರ್ಯ ಕಲ್ಪಿಸಲ್ಪಟ್ಟಿತ್ತು. ಬಟ್ಟೆಬರೆಗಳನ್ನು ಹರಿದು ಚಂದ್ರ ಒಗೆಯುತ್ತಿದ್ದ.

ಆರೇ ತಿಂಗಳಲ್ಲಿ ಅವನ ಸ್ಥಿತಿ ಚಿಂತಾಜನಕವಾಯಿತು. ಕೋಪ ತಾಪಗಳು ಅಳಿದವು. ದುಃಖ, ಆಲಸ್ಯ ಅವನನ್ನು ವ್ಯಾಪಿಸಿದವು. ತನಗಾದ ಅನ್ಯಾಯ, ತನ್ನಮೇಲೆ ನಡೆದ ಅತ್ಯಾಚಾರಕ್ಕೆ ಅವನ ಮನ ರೋಸಿಹೋಯಿತು. ಮುನಿಯನ್ನು ನೋಡಬೇಕೆಂದು ಬಯಸಿದ. ಡಾಕ್ಟರು ಅವನ ಪ್ರಾರ್ಥನೆಯನ್ನು ನಿರಾಕರಿಸಿದರು.

ಒಂಭತ್ತು ತಿಂಗಳ ತರುವಾಯ ಚಂದ್ರೂ ಗುಣಹೊಂದಿದ್ದಾನೆಂದು ಸಾರಿ ಅವನನ್ನು ಬಿಡುಗಡೆ ಮಾಡಿದರು. ಅವನು ಕೂಡಲೆ ರೈಲು ಹತ್ತಿ ಮೈಸೂರಿಗೆ ಪ್ರಯಾಣ ಬೆಳಸಿದ.

ಚಂದ್ರೂ ಮುಖ ನೋಡಿದ ಮುನಿಯಳ ಹೆಣ್ಣಾಳು ಅವನ ಮುಖದಮೇಲೆ ಬಾಗಿಲು ರಾಚಿ ಒಳಗೆ ಹೋಗಿ ಯಜಮಾನಿಗೆ ತಿಳಿಸಿದಳು. ಮುನಿ ಒಳಗಿನಿಂದ ಹೊರಗೆ ಬರಲೇ ಇಲ್ಲ. ಹಿಂದುಗಡೆ ಬಾಗಿಲಿಂದ ಪೋಲೀಸಿನವರಿಗೆ ಹೇಳಿಕಳಿಸಿದಳು.

ಚಂದ್ರೂ ಬಾಗಿಲು ತಟ್ಟಿ ತಟ್ಟಿ ಸಾಕಾಗಿ ಬಾಗಿಲು ಬಡಿದು

ಮನಸ್ಸಿೀ ಬಯ್ಯುವುದಕ್ಕಾರಂಭಿಸಿದ. ಮುನಿ ಒಳಗೆ ಜೀವ ಕೈಯಲ್ಲಿ ಹಿಡಿದುಕೊಂಡು ಪೋಲೀಸಿನವರ ದಾರಿ ಕಾಯುತ್ತ ಕುಳಿತಳು.

ಪೋಲೀಸಿನವರು ಬಂದು ಚಂದ್ರುವನ್ನು ಹಿಡಿದರು. ಮುನಿ ಒಳಗಿನಿಂದಲೇ ಕಿಟಕಿಯಲ್ಲಿ ಮುಖವಿಟ್ಟು "ಹುಚ್ಚ—ತಪ್ಪಿಸಿಕೊಂಡು ಬಂದಿದ್ದಾನೆ" ಎಂದಳು.

ಪೋಲೀಸಿನವರು ಅವನನ್ನು ಬಂಧಿಸಿ ಬೆಂಗಳೂರಿಗೆ ಸಾಗುಹಾಕಿದರು.

ಮತ್ತೆ ಚಂದ್ರೂಗೆ ಮಾನಸಿಕ ಆಸ್ಪತ್ರೆಯ ಕಾರಾಗೃಹ ಪ್ರಾಪ್ತಿಯಾಯಿತು.

೯

ಒಂದು ವರ್ಷದ ತರುವಾಯ ಅವನನ್ನು ಹೊರಬಿಟ್ಟರು. ಚಂದ್ರೂ ನಿಜವಾಗಿ ಹುಚ್ಚನಾಗಿಬಿಟ್ಟಿದ್ದ. ಗಳಿಗೆಗೊಮ್ಮೆ 'ಜೈ ಶಂಕರ್—ಭಗವಾನ್' ಎಂದು ಕೂಗುತ್ತಿದ್ದ. ಸಿಕ್ಕಿದ್ದನ್ನು ತಿನ್ನುತ್ತಿದ್ದ—ಸಿಕ್ಕಿದಲ್ಲಿ ಮಲಗುತ್ತಿದ್ದ.

ಅವನನ್ನು ಮನೆಗೆ ಕರೆತರಬೇಕೆಂದು ಜಾನಕಿ ಮಾಡಿದ ಪ್ರಯತ್ನ ವಿಫಲವಾಯಿತು. ತಿನ್ನುವುದಕ್ಕೆ ಕೊಟ್ಟಿದ್ದನ್ನು ತಿಪ್ಪೆಗೆ ಎಸೆಯುತ್ತಿದ್ದ. ಬೀದಿಯ ಎಂಜಲನ್ನು ಪ್ರೀತಿಯಿಂದ ಭುಂಜಿಸುತ್ತಿದ್ದ.

ಬೆಂಗಳೂರಿನ ಬೀದಿಗಳೆಲ್ಲಾ ಚಂದ್ರೂ ವಾಸಗೃಹಗಳಾದುವು. ಪುಂಡ ಪೋಕರಿ ಹುಡುಗರೆಲ್ಲಾ ಅವನ ಬಳಗಕ್ಕೆ ಸೇರಿದರು ಅವನ ಯೋಗಕ್ಷೇಮ ನೋಡಿಕೊಳ್ಳಲು ಜಾನಕಿ ಒಬ್ಬ ಆಳನ್ನು ಗೊತ್ತು ಮಾಡಿದಳು ಚಂದ್ರೂ ಹೊಡೆತ ತಡೆಯಲಾರದೆ ಆಳು ಓಡಿ ಹೋದ. ಚಂದ್ರೂ ಸ್ವೇಚ್ಛೆಯಾಗಿ ಅಲೆಯತೊಡಗಿದ

ಒಂದು ದಿನ ಅವನು ಇದ್ದಕ್ಕಿದ್ದಂತೆ ಮಾಯವಾದ. ಜಾನಕಿ ಊರನ್ನೆಲ್ಲಾ ಹುಡುಕಿಸಿದಳು. ಚಂದ್ರೂ ಪತ್ತೆ ಸಿಗಲಿಲ್ಲ.

ಜಾನಕಿ ಮುಖ ಮುಚ್ಚಿಕೊಂಡಳು. ಕಣ್ಣೀರು ಧಾರೆಧಾರೆಯಾಗಿ ಸುರಿಯುತ್ತಿತ್ತು. 'ನಾನು ಪಾಪಿ! ನಿರ್ಭಾಗ್ಯೆ' ಎಂದು ತನ್ನನ್ನು ತಾನೇ ಶಪಿಸಿಕೊಂಡಳು.

# ತ್ರಿಳಿವು ಮೂಡಿತು

ಗೋಪಾಲಕೃಷ್ಣ ಗೆಳೆತನಕ್ಕೆ ಯೋಗ್ಯನಾದ ಮನುಷ್ಯ. ಗೆಳೆಯರಿಗಾಗಿ ಬೇಕಾದುದನ್ನು ಮಾಡುವ ಸ್ವಭಾವ, ಔದಾರ್ಯ. ಕಾಲೇಜಿನಲ್ಲಿ ಅಧ್ಯಾಪಕರ ಅಚ್ಚುಮೆಚ್ಚು. ಆಟದ ಬಯಲಿನಲ್ಲಿ ಅವನು ನಿಜವಾದ 'ಸ್ಪೋರ್ಟ್ಸ್‌ಮನ್'. ಗೋಪಾಲಕೃಷ್ಣ ಜೂನಿಯರ್ ಬಿ.ಎ. ಯಲ್ಲಿದ್ದಾಗಲೇ ಅವನಿಗೆ ಲಗ್ನವಾಯಿತು. ರೆವಿನ್ಯೂ ಸೆಕ್ರೆಟೇರಿಯಟ್ಟಿನ ಸೂಪರಿಂಟೆಂಡೆಂಟರಾಗಿದ್ದ ಗೋವಿಂದರಾಯರ ಮಗಳು ರುಕ್ಮಿಣಿ, ಗೋಪಾಲಕೃಷ್ಣನಿಗೆ ಅನುರೂಪಳಾದ ಪತ್ನಿಯೆನ್ನುವುದಕ್ಕೆ ಸಂದೇಹವಿರಲಿಲ್ಲ.

ಕಾಲೇಜು ಬಿಟ್ಟ ಕೂಡಲೆ ಗೋಪಾಲಕೃಷ್ಣನಿಗೆ ಮಾವನವರ ಪ್ರಭಾವದಿಂದ ಸೆಕ್ರೆಟೇರಿಯಟ್ಟಿನಲ್ಲಿ ಎಪ್ಪತ್ತೈದು ರೂಪಾಯಿನ ಕೆಲಸವೂ ಸಿಕ್ಕಿತು. ಕೆಲಸ ಸಿಕ್ಕಿದ ನಾಲ್ಕು ತಿಂಗಳ ಮೇಲೆ ಅವನು ಬೇರೆ ಮನೆ ಮಾಡಿ ಸಂಸಾರ ಹೂಡಿದ.

ಅವರ ಅಣಿಯಾದ ಪುಟ್ಟ ಸಂಸಾರ ಎಲ್ಲರಿಗೂ ಅಚ್ಚುಮೆಚ್ಚಾಗಿತ್ತು. ಗೋವಿಂದರಾಯರು ಹಳ್ಳಿಯಿಂದ ಬರುತ್ತಿದ್ದ ಭತ್ತ, ರಾಗಿ,

ಬೆಲ್ಲ, ಸೌದೆ, ಹುಣಿಸೇಹಣ್ಣು, ಸೀಗೆಕಾಯಿ, ತರಕಾರಿ ಮಗಳ ಮನೆಗೆ ಅಲ್ಪ ಸ್ವಲ್ಪ ಕಳುಹಿಸುತ್ತಿದ್ದರು. ಬಂದಾಗ ಹೋದಾಗ ಮಗಳ ಕೈಗೆ ಐದು – ಹತ್ತುರೂಪಾಯಿ ಹಾಕಿ ಹೋಗುತ್ತಿದ್ದರು. ಅವರ ಸಹಾಯ ಮತ್ತು ಗೋಪಾಲಕೃಷ್ಣನ ಸಂಬಳದಿಂದ ಸಂಸಾರ ಸುಖವಾಗಿ ಸಾಗಿತ್ತು.

ವಾರಕ್ಕೊಮ್ಮೆಯಾದರೂ ಗೆಳೆಯರನ್ನು ಮನೆಗೆ ಕರೆದೊಯ್ದು ಅವರಿಗೆ ಸಿಹಿ ಅಡಿಗೆ ಮಾಡಿಸಿ ಹಾಕದಿದ್ದರೆ, ಗೋಪಾಲಕೃಷ್ಣನಿಗೆ ತೃಪ್ತಿಯಿಲ್ಲ. ರುಕ್ಮಿಣಿ ಗಂಡ ಹೇಳಿದ ಅಡಿಗೆಯನ್ನು ಸಂತೋಷವಾಗಿ ರುಚಿಕಟ್ಟಾಗಿ ಮಾಡಿ ಬಡಿಸುತ್ತಿದ್ದಳು. ಅವನ 'ಮಾದರಿ ಸಂಸಾರ' ನೋಡಿ ನಾವೆಲ್ಲಾ ಹಿಗ್ಗುತ್ತಿದ್ದೆವು.

ಆದರೆ ಈ ಸುಖದ ಬೆಳದಿಂಗಳಿನಲ್ಲಿಯೂ ಒಂದು ದುಃಖದ ಕಾರ್ಮೋಡ ಸುಳಿದಿತ್ತು. ರುಕ್ಮಿಣೀಗೆ ಪ್ರತಿತಿಂಗಳೂ ಹೊರಗಾದ ಕೂಡಲೆ ತಪ್ಪದೆ ಹೊಟ್ಟೆನೋವು ಕಾಣಿಸಿಕೊಳ್ಳುತ್ತಿತ್ತು. ಗೋವಿಂದ ರಾಯರು ದಕ್ಷರಾದ ಡಾಕ್ಟರುಗಳ ಕೈಯಲ್ಲಿ ಮಗಳಿಗೆ ಚಿಕಿತ್ಸೆಮಾಡಿ ಸಿದರು. ನೋವು ಕಡಿಮೆಯಾಗುತ್ತ ಬಂದಿದ್ದರೂ ಅದು ಕಾಣಿಸಿ ಕೊಳ್ಳುವುದು ತಪ್ಪಲಿಲ್ಲ.

ಮದುವೆಯಾಗಿ ಮೂರು ವರ್ಷವಾದರೂ ರುಕ್ಮಿಣಿಗೆ ಮಕ್ಕಳಾಗ ಲಿಲ್ಲ. ಮನೋರೋಗ ಆಕೆಯನ್ನು ಕಾಡತೊಡಗಿತು. ಆಕೆಯ ಕಂದಿ ದಾನನ ಕಂಡು ಗೋಪಾಲಕೃಷ್ಣ ಖಿನ್ನನಾಗುತ್ತಿದ್ದ.

ಗೋಪಾಲಕೃಷ್ಣನ ಸ್ವಭಾವದಲ್ಲಿ ಒಂದೇ ಕುಂದು. ಅವನ ಆತುರಕ್ಕೆ ಕೊನೆಮೊದಲೇ ಇಲ್ಲ. ತಲೆಯಲ್ಲಿ ಒಂದು ವಿಚಾರ ಹೊಳೆದ ಕೂಡಲೆ ಅದನ್ನು ಕಾರ್ಯೋನ್ಮುಖಮಾಡಿ ಬಿಡಬೇಕು. ನಾಲ್ಕು ದಿನ ವಿಚಾರ ತಲೆಯಲ್ಲಿಯೇ ನಿಂತು ಪಕ್ವವಾಗಿ ಒಂದು ಸುಸ್ಪಷ್ಟ ಸ್ವರೂಪ ಪಡೆಯುವುದಕ್ಕೆ ಅವನು ಅವಕಾಶ ಕೊಡುತ್ತಿರಲಿಲ್ಲ, 'ಆತುರಗಾರನಿಗೆ ಬುದ್ಧಿ ಮಟ್ಟ' ಎಂದು ಅವನ ತಂದೆ ಪದೇ ಪದೇ ಹೇಳುತ್ತಿದ್ದರು.

ಮಕ್ಕಳಾಗಲಿಲ್ಲವೆಂಬ ದುಃಖ ರುಕ್ಮಿಣಿಯನ್ನು ಬಾಧಿಸಿದಂತೆ ಗೋಪಾಲಕೃಷ್ಣನನ್ನೂ ಬಾಧಿಸತೊಡಗಿತು.

ಗೋಪಾಲಕೃಷ್ಣನ ಅದೃಷ್ಟವಶಾತ್ ವಾಣೀವಿಲಾಸ್ ಆಸ್ಪತ್ರೆಗೆ ಮುಂಬಯಿಯ ಪ್ರಸಿದ್ಧ ಡಾಕ್ಟರಾದ ಮಿಸ್. ದಸ್ತೂರ್ 'ಲೇಡಿ ಮೆಡಿಕಲ್ ಆಫೀಸರ್' ಆಗಿ ಬಂದರು. ಗೋಪಾಲಕೃಷ್ಣ ಹೆಂಡತಿಯನ್ನು ಕರೆದುಕೊಂಡು ಹೋಗಿ ಇಪ್ಪತ್ತು ರೂಪಾಯಿ ಶುಲ್ಕ ಕೊಟ್ಟು ಅವರಿಗೆ ತೋರಿಸಿದ. 'ಆಪರೇಷನ್ ಮಾಡಬೇಕು. ಆಪರೇಷನ್ ಆದರೆ ಮಕ್ಕಳಾಗುವ ಸಂಭವವಿದೆ.' ಎಂದಾಕೆ ಹೇಳಿದರು. ಗೋಪಾಲ ಕೃಷ್ಣ ತಡಮಾಡದೆ ಹೆಂಡತಿಯನ್ನು ಆಸ್ಪತ್ರೆಗೆ ಸೇರಿಸಿ ಆಪರೇಷನ್ ಮಾಡಿಸಿದ.

ಆಪರೇಷನ್ನಿನ ಪ್ರಭಾವದಿಂದ ಚೇತರಿಸಿಕೊಳ್ಳಲು ರುಕ್ಮಿಣಿಗೆ ಆರು ತಿಂಗಳು ಬೇಕಾಯಿತು. ಮತ್ತೆ ಆರು ತಿಂಗಳಾದರೂ ಉಪಚಾರ, ಶುಶ್ರೂಷೆಗಳಿಗೆ ಬೇಕಾಯಿತು. ರುಕ್ಮಿಣಿಯ ತಾಯಿ ಮಗಳ ಮನೆಗೇ ಬಂದು ನಿಂತು ಅವಳ ಯೋಗಕ್ಷೇಮ ನೋಡಿಕೊಂಡರು. ರುಕ್ಮಿಣಿಯ ಹೊಟ್ಟೆ ನೋವು ನಿಂತು, ಆಕೆ ಪುನರ್ಜನ್ಮ ಪಡೆದಳು.

ವರ್ಷಾಂತ್ಯದೊಳಗಾಗಿ ರುಕ್ಮಿಣಿ ಬಸುರಿಯಾದಳು. ಗೋಪಾಲ ಕೃಷ್ಣ ಅವನ ಅತ್ತೆಮಾವಂದಿರ ಆನಂದಕ್ಕೆ ಪಾರವೇ ಇಲ್ಲ. ಎಲ್ಲ ಶಾಸ್ತ್ರವಿಧಿಗಳೂ ಕ್ರಮವಾಗಿ ಆದವು. ದಿನ ತುಂಬಲು ರುಕ್ಮಿಣಿ ಒಂದು ಗಂಡುಮಗುವನ್ನು ಪ್ರಸವಿಸಿದಳು. ಬಾಣಂತನಕ್ಕೆ ಅವಳ ತಾಯಿಯೇ ಬಂದು ನಿಂತರು.

ಮಗುವಿಗೆ ಬೇಕಾದ ಆಟದ ಸಾಮಾನು, ಬಟ್ಟೆ ಬರೆ, ಪೆರಾಂಬುಲೇಟರ್ ಒದಗಿಸುವುದರಲ್ಲಿ ಗೋಪಾಲಕೃಷ್ಣನಿಗೆ ಬೇರೆ ಯಾವ ಕೆಲಸಕ್ಕೂ ವಿರಾಮವೇ ದೊರೆಯುತ್ತಿರಲಿಲ್ಲ.

ಐದು ತಿಂಗಳ ಬಾಣಂತನ ಮುಗಿಸಿಕೊಂಡು ರುಕ್ಮಿಣಿ ತನ್ನ ಮನೆಗೆಲಸಕ್ಕೆ ನಿಂತಳು. ಕಛೇರಿ ಮುಗಿದ ಕೂಡಲೆ ಗೋಪಾಲಕೃಷ್ಣ ಹುಲ್ಲೆಮರಿಯಂತೆ ಮನೆಗೆ ಹಾರಿ ಬರುತ್ತಿದ್ದ. ಹೆಂಡತಿಯನ್ನು ಮಗುವನ್ನು ಕರೆದುಕೊಂಡು ಲಾಲ್‌ಬಾಗಿಗೊ ಕಬ್ಬನ್ ಪಾರ್ಕಿಗೋ ಹೋಗುತ್ತಿದ್ದ. ನಾಲ್ಕುದಿನ ಕಣ್ಮರೆಯಾಗಿದ್ದ ಬೆಳದಿಂಗಳು ಅವನ ಮನೆಯಲ್ಲಿ ಮತ್ತೆ ಮೂಡಿತು.

ಮಗು ಆರೋಗ್ಯವಾಗಿ ದೃಢಕಾಯವಾಗಿತ್ತು. ರುಕ್ಮಿಣಿಯ ಆರೈಕೆ, ನಿತ್ಯ ಗಾಳಿ ಸಂಚಾರದಿಂದ ಅದು ಆರು ತಿಂಗಳಿಗೇ ಒಂದು —ಒಂದೂವರೆ ವರ್ಷದ ಮಗುವಿನಂತೆ ಕಾಣುತ್ತಿತ್ತು. ತಂದೆ ತಾಯಿಗಳಿಬ್ಬರ ಕಣ್ಮಣಿಯಾಗಿ ಬೆಳೆಯುತ್ತಿತ್ತು.

ಮಗುವಿಗಾಗಿ ಯಾವ ತ್ಯಾಗವಮಾಡುವುದಕ್ಕೂ ರುಕ್ಮಿಣಿ ಹಿಂಜರಿಯುತ್ತಿರಲಿಲ್ಲ. ಮಗುವಿಗೆ ಬಾಧಕವಾಗುವ ಯಾವ ಆಹಾರವನ್ನೂ ಆಕೆ ಸೇವಿಸುತ್ತಿರಲಿಲ್ಲ. ಅದಕ್ಕೆ ಹೊತ್ತು ಹೊತ್ತಿಗೆ ಅಡೆಕ್ಸೊಲಿನ್, ಬೆರಿನ್ ಕೊಡುವುದನ್ನೊಂದು ದಿನವೂ ತಪ್ಪಿಸುತ್ತಿರಲಿಲ್ಲ. ಸ್ವಲ್ಪ ತಣ್ಣನೆಯ ಗಾಳಿ ಸುಳಿದರಾಯಿತು. ರುಕ್ಮಿಣಿ ಮಗುವಿಗೆ ಬೆಚ್ಚನೆ ಬಟ್ಟೆ ಹಾಕಿ ಹಾಲಿಗೆ ಒಂದೆರಡು ಹನಿ ಬ್ರ್ಯಾಂಡಿ ಸೇರಿಸಿ ಕುಡಿಸಿ ಮಲಗಿಸುತ್ತಿದ್ದಳು. ಯಾರು ಎಷ್ಟೋ ಆಗ್ರಹ ಮಾಡಿದರೂ ಹೊರಗೆ ಕಾಲಿಡುತ್ತಿರಲಿಲ್ಲ ಮಳೆ ಬರುವ ಸೂಚನೆ ಕಂಡುಬಂದರೆ ಸಾಕು, ಪೆರಾಂಬುಲೇಟರ್ ಉಗ್ರಾಣ ಸೇರುತ್ತಿತ್ತು.

ಗೋಪಾಲಕೃಷ್ಣನಿಗೆ ಪುತ್ರ ಜನನವಾದ ವೇಳೆ ಪ್ರಶಸ್ತವಾದುದೆಂದು ಕಾಣುತ್ತದೆ. ಅವನನ್ನು ರೆವಿನ್ಯೂ ಸೆಕ್ರೆಟೇರಿಯಟ್ಟಿನಿಂದ ಆರ್. ಎ. ಮತ್ತು ಎಲ್. ಸಿ. ಇಲಾಖೆಗೆ ಬದಲಾಯಿಸಿ ಸಂಬಳ ಬಡ್ತಿಮಾಡಿದರು. ಕೆಲಸವೂ ಸ್ವಲ್ಪ ಹೆಚ್ಚಾಯಿತು.

ರುಕ್ಮಿಣಿ ತಾಯಿಯ ಮನೆಯಲ್ಲಿ ಅವಳ ತಂಗಿ ಶಾರದೆಯ 'ಲಗ್ನಪತ್ರಿಕೆ ಮುಹೂರ್ತ' ನಿಶ್ಚಯಿಸಿದರು. ಅದೇ ಹೊತ್ತಿಗೆ ಪ್ರಜಾಪ್ರತಿನಿಧಿ ಸಭೆಯ ಅಧಿವೇಶನ ಆರಂಭವಾಯಿತು. ತಾನು ವೇಳೆಗೆ ಸರಿಯಾಗಿ ಬರುವುದಕ್ಕಾಗುತ್ತಿಲ್ಲವಲ್ಲಾ ಎಂದು ಗೋಪಾಲಕೃಷ್ಣ ತುಂಬ ಪಶ್ಚಾತ್ತಾಪಪಟ್ಟ. ಮಗುವಿಗೂ ಒಂದೆರಡು ದಿನದಿಂದ ನೆಗಡಿಯಾಗಿ ಮೈ ಬೆಚ್ಚಗಾಗಿತ್ತು. ಆ ನೋವು ಬೇರೆ ಗೋಪಾಲಕೃಷ್ಣನನ್ನು ಬಾಧಿಸುತ್ತಿತ್ತು. ಕಛೇರಿಗೆ ಹೊರಡುವ ಮುನ್ನ ಹೆಂಡತಿಯನ್ನು ಕೇಳಿದ

"ಸಂಜೆ ಲಗ್ನಪತ್ರಿಕೆ, ಏನು ಮಾಡುತ್ತಿ?"

“ ನಾನು ಅಲ್ಲಿಗೆ ಹೋಗಿರುತ್ತೇನೆ. ಕಛೇರಿ ಮುಗಿದ ಕೂಡಲೆ ನೀವು ನೇರವಾಗಿ ಅಲ್ಲಿಗೇ ಬಂದುಬಿಡಿ.”

“ ಮನೆಗೆ ಬಂದು ಬಟ್ಟೆಬರೆ ಬದಲಾಯಿಸಿಕೊಂಡು ಬರುತ್ತೇನೆ. ಆದರೆ ಮಗುವಿಗೆ ಮೈಯಲ್ಲಿ ಸರಿಯಿಲ್ಲವಲ್ಲಾ ! ”

“ ಬೆಚ್ಚಗೆ ಹೊದೆಸಿಕೊಂಡು ಕರೆದುಕೊಂಡು ಹೋಗುತ್ತೇನೆ.”

“ ನೀನು ಹೋಗಲೇ ಬೇಕೇ ?”

“ ಹೋಗದಿದ್ದರಾಗುತ್ತದೆಯೇ ? ಇರುವವಳು ಒಬ್ಬಳೇ ತಂಗಿ.”

“ ಮಗುವಿಗೆ ಹೆಚ್ಚುಕಡಿಮೆಯಾದರೆ ? ”

“ ಆಗದಂತೆ ನಾನು ನೋಡಿಕೊಳ್ಳುತ್ತೇನೆ. ”

“ ನಿನ್ನ ಇಷ್ಟ. ”

ಎಂದು ಹೇಳಿ ಕಛೇರಿಗೆ ಹೊರಟುಬಿಟ್ಟ.

ಸಂಜೆ ನಾಲ್ಕುಗಂಟೆ ಹೊತ್ತಿಗೆ ಗಂಡನಿಗೆ ತಿಂಡಿ ಕಾಫಿ ಮಾಡಿ ಮುಚ್ಚಿಟ್ಟು, ತಾನು ಹೆರಳುಹಾಕಿಕೊಂಡು ಹೊಸ ಸೀರೆ ಕುಪ್ಪಸ ಧರಿಸಿ, ಮಗುವಿಗೆ ಉಣ್ಣೆಯ ಬಟ್ಟೆ ಹಾಕಿ, ಶಾಲು ಹೊದೆಸಿ, ಮನೆಗೆ ಬೀಗ ಹಾಕಿ ಪಕ್ಕದ ಮನೆಯವರ ಕೈಗೆ ಬೀಗದಕೈ ಕೊಟ್ಟು ತನ್ನನ್ನು ಕರೆದೊಯ್ಯಲು ಬಂದಿದ್ದ ತಮ್ಮ ಸುಬ್ಬೂ ಜತೆ ರುಕ್ಮಿಣಿ ಹೊರಟಳು.

ತಂದೆಯ ಮನೆ ತಲುಪುವಷ್ಟರಲ್ಲಿ ಇದ್ದಕ್ಕಿದ್ದಂತೆ ಮಳೆ ಧಡ ಧಡನೆ ಸುರಿಯುವುದಕ್ಕಾರಂಭಿಸಿತು. ರುಕ್ಮಿಣಿ ಮಗುವನ್ನು ನೆನಸದಿರಲು ವಿಶ್ವಪ್ರಯತ್ನಮಾಡಿದಳು. ಸಾರ್ಥಕವಾಗಲಿಲ್ಲ. ತಾಯಿ, ಮಗು, ಸುಬ್ಬೂ ಸಂಪೂರ್ಣವಾಗಿ ನೆನೆದರೂ ಮನೆ ತಲುಪಿದೊಡನೆಯೇ ಮೊದಲು ಮಗುವಿನ ಬಟ್ಟೆ ಬದಲಾಯಿಸಿ, ಅದರ ಮೈಕೈಗೆ ನೀಲಗಿರಿ ಎಣ್ಣೆ ತಿಕ್ಕಿ ಮಲಗಿಸಿ, ಅನಂತರ ತನ್ನ ವಸ್ತ್ರ ಬದಲಾಯಿಸಿದಳು.

ಗೋಪಾಲಕೃಷ್ಣ ಮನೆ ತಲುಪುವ ವೇಳೆಗೆ ಎಂಟು ಗಂಟೆಯಾಗಿತ್ತು. ಆರಿದ್ದ ಕಾಫಿಯನ್ನೇ ಹುಯ್ದುಕೊಂಡು, ಬಟ್ಟೆ ಬದಲಾಯಿಸಿ ಮಾವನ ಮನೆಗೆ ಹೋದ.

‘ ಲಗ್ನಪತ್ರಿಕೆ ’ ಮುಹೂರ್ತ ಮುಗಿದಿತ್ತು. ಎಲ್ಲರಿಗೂ ಎಲೆ

ಹಾಕಿ ಬಡಿಸುತ್ತಿದ್ದರು. ಗೋವಿಂದರಾಯರು ಅಳಿಯನ ನಿರೀಕ್ಷೆಯಲ್ಲಿದ್ದರು.

ಸೊಗಸಾದ ಭೂರಿಭೋಜನವಾಯಿತು. ಹೆಣ್ಣುಮಕ್ಕಳು ಊಟ ಮುಗಿಸುವ ವೇಳೆಗೆ ರಾತ್ರಿ ಹನ್ನೊಂದು ಹೊಡೆಯಿತು.

" ಇಲ್ಲೇ ಇದ್ದು ಬಿಡಿ. ರಾತ್ರಿ ಇಷ್ಟು ಹೊತ್ತಿನ ಮೇಲೆ ಮನೆಗೆ ಹೋಗುವುದೇಕೆ ? " ಎಂದು ಗೋವಿಂದರಾಯರು ಹೇಳಿದರು.

" ಬೆಳಿಗ್ಗೆ ನಾನು ಕಛೇರಿಗೆ ಹೋಗಬೇಕಾಗಿದೆ. ಮನೆಗೇ ಹೋಗಿ ಬಿಡುತ್ತೇವೆ. ಮಳೆಯೂ ನಿಂತಿದೆ. "

ಎಂದು ಗೋಪಾಲಕೃಷ್ಣ ಮಗುವನ್ನೆತ್ತಿಕೊಂಡು ಹೆಂಡತಿಯೊಡನೆ ತನ್ನ ಮನೆಗೆ ಹೊರಟ.

ಮಗುವಿನ ಮೈ ಬೆಚ್ಚಗಾಗಿತ್ತು. ಅದನ್ನು ಮುಟ್ಟಿನೋಡಿದ. ಸ್ವಲ್ಪ ಗಾಬರಿಯಾಯಿತು.

" ರುಕ್ಕೂ, ಮಳೆಯಲ್ಲಿ ಮಗೂ ನೆನೆಯಿತೇ ? "

" ಸ್ವಲ್ಪ ಇರಚಲು ಬಿದ್ದಿರಬಹುದು. ಏಕೆ ? ಜ್ವರ ಹೆಚ್ಚಾಗಿದೆಯೇ ? "

" ನೀನು ಇವತ್ತು ಹೋಗದಿದ್ದರೆ ಏನು ನಿಂತು ಹೋಗುತ್ತಿತ್ತು."

ಎಂದು ಬಿರುಸಾಗಿ ನುಡಿದ

ಮಗುವಿಗೆ ಜ್ವರ ಏರಿತ್ತು. ಜ್ವರ ತಾಪದಲ್ಲಿ ಅದು ತೊಳಲುತ್ತಿತ್ತು. ಗೋಪಾಲಕೃಷ್ಣ ಹೆಂಡತಿ ಮಗುವನ್ನು ಮನೆಯಲ್ಲಿ ಬಿಟ್ಟು ಬೈಸಿಕಲ್ ಹತ್ತಿಕೊಂಡು ಹೋಗಿ ಡಾಕ್ಟರನ್ನು ಕರೆತಂದ. ಅವರು ಒಂದು ಇಂಜಕ್ಷನ್ ಚುಚ್ಚಿ ಹೋದರು. ರಾತ್ರಿ ಗಂಡ ಹೆಂಡತಿಯರಿಬ್ಬರಿಗೂ ನಿದ್ರೆಯಿಲ್ಲ. ಮಗು ಆಗಾಗ್ಗೆ ಬೆಚ್ಚಿ ಅಳುತ್ತಿತ್ತು.

ಅಸೆಂಬ್ಲಿ ನಡೆಯುತ್ತಿತ್ತು. ಗೋಪಾಲಕೃಷ್ಣ ರಜೆ ಪಡೆದು ಮನೆಯಲ್ಲಿ ನಿಲ್ಲಲು ಸಾಧ್ಯವಿರಲಿಲ್ಲ. ಗುಲಾಮಗಿರಿಯನ್ನು ಶಪಿಸಿದ. ಮಗು ಕೆಮ್ಮುವುದಕ್ಕಾರಂಭಿಸಿತ್ತು. ಅದರ ಶ್ವಾಸಕೋಶ ವೇಗವಾಗಿ ಆಡುತ್ತಿತ್ತು. ಗಂಟಲಲ್ಲಿ ಗೊರಗೊರ ಶಬ್ದ. ಡಾಕ್ಟರು ಬಂದವರೇ ' ಇದು ಬ್ರಾಂಕೋ–ನ್ಯೂಮೋನಿಯಾ. ಬಹಳ ಎಚ್ಚರವಾಗಿರಬೇಕು '

ಎಂದು ಹೇಳಿ ಮತ್ತೆ ಇಂಜಕ್ಷನ್ ಚುಚ್ಚಿಹೋದರು. ಡಾಕ್ಟರು ಹೇಳಿದ್ದನ್ನು ಕೇಳಿ ರುಕ್ಮಿಣಿ ಭೂಮಿಗಿಳಿದು ಹೋದಳು.

ಸಂಜೆ ಕಛೇರಿ ಮುಗಿಸಿಕೊಂಡು ಗೋಪಾಲಕೃಷ್ಣ ನೇರವಾಗಿ ಮನೆಗೆ ಬಂದ. ಮಗುವಿನ ಪರಿಸ್ಥಿತಿ ತೀರ ಹದಗೆಟ್ಟಿತ್ತು. ಡಾಕ್ಟರು ಅದೇ ಬಂದು ಹೋಗಿದ್ದರು. ಗೋಪಾಲಕೃಷ್ಣ ತಲೆಯಮೇಲೆ ಕೈ ಹೊತ್ತು ಕುಳಿತುಬಿಟ್ಟ. ಅವನ ಕಣ್ಣಲ್ಲಿ ಪ್ರವಾಹ ಹರಿಯಿತು.

ರುಕ್ಮಿಣಿ ತನಗೆ ತಿಳಿದ ದೇವರುಗಳಿಗೆಲ್ಲಾ ಮುಡಿಪು ಕಟ್ಟಿಟ್ಟಳು. ಮಗುವಿನ ಸಂಕಟ ನೋಡಿ ಹಣೆಹಣೆ ಚಚ್ಚಿಕೊಂಡಳು.

ರಾತ್ರಿಯಾಗುತ್ತಾ ಆಗುತ್ತಾ ಮಗುವಿನ ಪರಿಸ್ಥಿತಿ ಮತ್ತಷ್ಟು ಚಿಂತಾಜನಕವಾಯಿತು. ರಾತ್ರಿ ಹತ್ತು ಗಂಟೆಗೆ ಡಾಕ್ಟರು ಮತ್ತೊಮ್ಮೆ ಬಂದು ನೋಡಿಕೊಂಡು, ಇಂಜಕ್ಷನ್ ಕೊಟ್ಟರು.

" ಪ್ರಾಣಕ್ಕೆ ಭಯವಿಲ್ಲವೇ ಡಾಕ್ಟರೇ ? "

" ಇಲ್ಲವೆಂದು ಕಾಣುತ್ತದೆ. ಈ ರಾತ್ರಿ ಕಳೆದರೆ ನಾಳೆಯಿಂದ ಭಯವಿಲ್ಲ. ತುಂಬ ಎಕ್ಸ್‌ಪೋಸ್ ಆಗಿರಬೇಕು. "

ಎಂದು ಹೇಳಿಹೋದರು.

ಗಂಡ ಹೆಂಡತಿ ಇಬ್ಬರು ಮಗುವಿನ ಅಕ್ಕಪಕ್ಕದಲ್ಲಿ ಕುಳಿತು ರಾತ್ರಿಯೆಲ್ಲಾ ಜಾಗರಣೆ ಮಾಡಿದರು. ಮಗುವಿನ ಸಂಕಟ ಅವರ್ಣನೀಯವಾಗಿತ್ತು. ಒಂದು ರಾತ್ರಿ ಅವರ ಭಾಗಕ್ಕೆ ಒಂದು ಯುಗವಾಯಿತು.

ಬೆಳಿಗ್ಗೆ ಮಗು ವಿಪರೀತ ಸಂಕಟ ಪಡತೊಡಗಿತ್ತು. ರುಕ್ಮಿಣಿ, ಹಸಿವಾಗಿರಬಹುದೆಂದು ಎತ್ತಿಕೊಂಡು ಮೊಲೆಯೂಡಿಸಿದಳು. ಮೊಲೆಯನ್ನು ಹಿಂಡಿ ಹಾಲುಕುಡಿಯುವುದಕ್ಕೂ ಮಗುವಿಗೆ ತ್ರಾಣವಿಲ್ಲ. ರುಕ್ಮಿಣಿ ತಾನೇ ಮಗುವಿನ ಬಾಯಿಗೆ ಹಾಲು ಹಿಂಡಿದಳು. ಹಾಲು ಒಳಗೆ ಹೋಗಲೇ ಇಲ್ಲ. ಬಾಯಂಚಿನಲ್ಲಿ ಹೊರಗೆ ಬಂದುಬಿಟ್ಟಿತು. ರುಕ್ಮಿಣಿ ಗಾಬರಿಯಾಗಿ ಚೀರಿದಳು. ಗೋಪಾಲಕೃಷ್ಣ ಮುಖ ತೊಳೆಯುತ್ತಿದ್ದವನು ಓಡಿ ಬಂದ. ಮಗುವನ್ನು ದಿಟ್ಟಿಸಿ ನೋಡಿದ. ಆ ಪುಟ್ಟ ದೇಹದಲ್ಲಿ ಪ್ರಾಣ ಉಳಿದಿರಲಿಲ್ಲ.

ಗೋಪಾಲ್ಕೃಷ್ಣ ತಾನೇ ಮಗುವನ್ನೆತ್ತಿಕೊಂಡು ಹೋಗಿ ಮಣ್ಣು ಮಾಡಿ ಬಂದ.

ಮನೆಗೆ ಬಂದವನೇ ರುಕ್ಮಿಣಿಯ ಬಟ್ಟೆ ಬರೆ, ಸೀರೆ ಕುಪ್ಪಸ, ಒಡವೆಗಳನ್ನೆಲ್ಲಾ ಒಂದು ಗಂಟು ಕಟ್ಟಿ ಜಟಕಾ ಕರೆದು ಅದರಲ್ಲಿ ಹಾಕಿ ಹೆಂಡತಿಗೆ 'ಹೊರಡು' ಎಂದ. 'ಎಲ್ಲಿಗೆ' ಎಂದು ಕೇಳಿದಳು. 'ತೌರುಮನೆಗೆ' ಎಂದ.

ಹೆಂಡತಿಯನ್ನು ಮಾವನಮನೆಯ ಬಾಗಿಲಲ್ಲಿಳುಹಿ, ಅವಳ ಸಾಮಾನಿನ ಗಂಟನ್ನು ಅಲ್ಲಿಯೆ ಇಟ್ಟ.

"ಇನ್ನು ನಿನಗೆ ಇದೇ ಮನೆ. ಅಲ್ಲಿಗೆ ನೀನು ಬರುವ ಅಗತ್ಯ ವಿಲ್ಲ."

ಎಂದು ಹೇಳಿ ಅದೇ ಗಾಡಿ ಹತ್ತಿ ಹಿಂತಿರುಗಿದ.

ಕಛೇರಿಗೆ ಮೂರು ತಿಂಗಳು ರಜೆಗೆ ಬರೆದುಹಾಕಿ ತನ್ನ ಸಾಮಾನುಕಟ್ಟಿಕೊಂಡು ಹೊರಟುಹೋದ.

ಮಗಳ ಪರಿಸ್ಥಿತಿ ಕಂಡು ಗೋವಿಂದರಾಯರು ದಿಗ್ಭ್ರಾಂತರಾದರು. ಕೂಡಲೆ ಅಳಿಯನನ್ನು ಹುಡುಕಿಕೊಂಡು ಅವನ ಮನೆಗೆ ಹೋದರು. ಮನೆ ಬಾಗಿಲು ಹಾಕಿತ್ತು. ಅವನೆಲ್ಲಿಗೆ ಹೋದನೆಂಬುದು ಅಕ್ಕಪಕ್ಕ ದವರಿಗೆ ತಿಳಿಯದು. ಇಳಿಮುಖ ಹಾಕಿಕೊಂಡು ಮನೆಗೆ ಹಿಂತಿರುಗಿದರು.

ಗೋಪಾಲಕೃಷ್ಣ ಮೂರು ತಿಂಗಳು ಊರೂರು ತಿರುಗಿ ರಜೆ ಮುಗಿದ ಕೂಡಲೆ ಹಿಂದಿರುಗಿದ. ಮನೆ ಶೂನ್ಯವಾಗಿತ್ತು? ಅದರ ಸ್ಮಶಾನಶಾಂತಿ ಅವನಿಗೆ ಭಯವುಂಟುಮಾಡುತ್ತಿತ್ತು. ಹೊಟೇಲಿನಲ್ಲಿ ಊಟಮಾಡುತ್ತಿದ್ದ. ಮನೆಗೆ ಬಂದು ಯಾವುದಾದರೂ ಪುಸ್ತಕ ಹಿಡಿದು ಓದಲು ಕೂಡುತ್ತಿದ್ದ. ಹಿಂದಿನ ನೆನಪುಗಳು ಬಂದು ಕಾಡುತ್ತಿದ್ದವು. ಸಹಿಸಲಾರದೆ 'ಗೊಳೋ' ಎಂದು ಅಳುತ್ತಿದ್ದ.

ಗೋಪಾಲಕೃಷ್ಣನಿಗೆ ಗೆಳೆಯರೂ ಬೇಡವಾದರು. ಅವನ ಯೋಗ ಕ್ಷೇಮ ವಿಚಾರಿಸುವ ದಾಕ್ಷಿಣ್ಯ ತೋರಿದ ಗೆಳೆಯರನ್ನು ಛೀಮಾರಿ ಮಾಡಿ ಕಳುಹಿಸಿದ್ದ. ಈ ವಿಷಯ ಪ್ರಸ್ತಾಪಿಸಿದ ನನಗೆ 'ಇವನ ಸಹವಾಸ ಸಾಕಪ್ಪಾ' ಎನ್ನುವಷ್ಟು ಬೇಸರ ಬರಿಸಿದ್ದ.

ಅಪಾರವಾದ, ಆಳವಾದ ದುಃಖದ ಜತೆಗೆ, ಒಂದು ಮೊಂಡು ಹಟ ಅವನನ್ನು ಕಾಡುತ್ತಿತ್ತು. 'ಅವತ್ತು ರುಕ್ಮಿಣಿ ತಂದೆಯ ಮನೆಗೆ ಮಗುವನ್ನು ಕರೆದುಕೊಂಡು ಹೋಗದಿದ್ದರೆ ಮಗುವಿಗೆ ಏನು ಅಪಾಯ ಸಂಭವಿಸುತ್ತಿರಲಿಲ್ಲ. ಮಳೆಬರುವ ಹಾಗಿದೆ, ಹೋಗಬೇಡ ಎಂದೆ. ಅವಳು ಹಟಮಾಡಿಕೊಂಡು ಹೋಗಿ ಮಗುವನ್ನು ನೆನಸಿದಳು. ಮಗುವನ್ನು ಅವಳೇ ಕೈಯಾರೆ ಕೊಂದಳು' ಎಂಬುದೇ ಅವನ ವಿಚಾರಸರಣಿಯಾಗಿತ್ತು.

ಗೋಪಾಲಕೃಷ್ಣ ಊರಿಗೆ ಬಂದುದನ್ನು ತಿಳಿದು ಅವನ ಮಾವನವರು ಹುಡುಕಿಕೊಂಡು ಬಂದರು. ಮಾವನವರ ಮುಖದಲ್ಲಿ ನೀರಿಳಿಸಿ ಕಳುಹಿಸಿದ.

ತಮಗಾದ ಅಪಮಾನವನ್ನು ಮಗಳ ಮುಂದೆ ಗೋವಿಂದರಾಯರು ಬಿಡಿಸಿ ಹೇಳಲಿಲ್ಲ. 'ಅವರ ಕೋಪವಿನ್ನೂ ಇಳಿದಿಲ್ಲಮ್ಮ. ಈಗ ಮೇಲೆ ಬಿದ್ದುಹೋಗಿ ಅವರ ಮನಸ್ಸು ಕೆಡಿಸುವುದಕ್ಕಿಂತ ಸುಮ್ಮನಿರುವುದು ಮೇಲು' ಎಂದು ಮಗಳನ್ನು ಸಂತೈಸಿದರು.

ತಾನು ಮಾಡಿದ ಮಹಾಪರಾಧವೇನು ? ಗಂಡ ಏತಕ್ಕೆ ಇಷ್ಟು ಕೋಪಗೊಂಡಿದ್ದಾರೆ ? ಮನೆಬಿಟ್ಟು ಹೊರಗೆ ಹಾಕುವಷ್ಟು ಪ್ರಬಲವಾದ ತಪ್ಪನ್ನು ನಾನೇನು ಆಚರಿಸಿದೆ ? ಎಂದು ರುಕ್ಮಿಣಿ ಹಲವು ಸಾರಿ ವಿಚಾರಮಾಡಿದಳು. ಅವಳಿಗೆ ಅದು ಬಗೆಹರಿಯದ ಸಮಸ್ಯೆಯಾಯಿತು. ಕೊರಗಿ ಕೊರಗಿ ಕಡ್ಡಿಯಾಗುತ್ತ ಬಂದಳು. ಕಣ್ಣು ಗುಣಿಬಿತ್ತು, ಮುಖಬಾಡಿತು, ಮೈ ಒಣಗಿತು, ರಕ್ತ ನೀರಾಯಿತು. ಅವಳ ಅಳಲನ್ನು ನೋಡಿ ಅವಳ ತಾಯಿ, ತಂದೆ ಕೊರಗುತ್ತಬಂದರು.

ಒಂದು ದಿನ ಕಛೇರಿಯಿಂದ ಬಂದವನೇ ಗೋಪಾಲಕೃಷ್ಣ ಲಕ್ಷ್ಮೀಶನ ಜೈಮಿನಿಭಾರತ ಹಿಡಿದು ಕುಳಿತ. 'ಸೀತಾ ವನವಾಸ' ಪ್ರಕರಣ ಓದುತ್ತಿದ್ದ. ಕಥೆ ಅವನ ಮನಸ್ಸಿನಮೇಲೆ ವಿಲಕ್ಷಣ ಪರಿಣಾಮವನ್ನುಂಟುಮಾಡಿತು. 'ಸೀತೆ ಮಾಡಿದ ತಪ್ಪೇನು' ಎಂದು ವಿಚಾರಮಾಡತೊಡಗಿದ. ಸೀತೆಯಮೇಲೆ ಬಂದಿದ್ದ ಎಲ್ಲ ಆಪಾದನೆಗಳನ್ನೂ ತೂಗಿ ನೋಡಿ ಆಕೆ 'ನಿರಪರಾಧಿ' ಎಂದು ತೀರ್ಪುಕೊಟ್ಟ.

ತಕ್ಷಣವೇ ಗೋಪಾಲಕೃಷ್ಣನ ಮನಸ್ಸು ತನ್ನ ಜೀವನದ ಕಡೆಗೆ ಹರಿಯಿತು. ರುಕ್ಮಿಣಿ ಮಾಡಿದ ತಪ್ಪೇನು ? ಎಂದು ವಿಚಾರ ಮಾಡಿದ. ಮಳೆ ಬಂದ ದಿನ, ಬೇಡವೆಂದರೂ ಮಗುವನ್ನೆತ್ತಿಕೊಂಡು ತೌರುಮನೆಗೆ ಹೋದುದು. ಹೋಗದಿದ್ದರಾಗುತ್ತಿತ್ತೋ ? — ಹೇಗೆ ಸಾಧ್ಯ, ಇದ್ದ ಒಬ್ಬ ತಂಗಿಯ ನಿಶ್ಚಿತಾರ್ಥಕ್ಕೆ ಅಕ್ಕ ಹೋಗಬೇಡವೇ ? ರುಕ್ಮಿಣಿಯ ಬಯಕೆ ಸಹಜವಾದುದೆಂದು ತೋರಿತು. ಹೋದರೆ ಹೋಗಲ್ಲಿ, ಮಗುವನ್ನು ಸರಿಯಾಗಿ ನೋಡಿಕೊಳ್ಳಬೇಕಾಗಿತ್ತು, ಮಳೆ ಯಲ್ಲಿ ನೆನಸಬಾರದಾಗಿತ್ತು.—ಅವಳೇನು ಉದ್ದೇಶಪೂರ್ವಕವಾಗಿ ನೆನ ಸಿದಳೇ ? ನೆನಸಬಾರದೆಂದು ವಿಶ್ವಸಾಹಸ ಮಾಡಿರಬೇಕು. ಆದರೆ ಪ್ರಯತ್ನ ಫಲಿಸದೇ ಇರಬೇಕು.

ಈ ವಾದವೈಖರಿಯಲ್ಲಿ ಒಂದು ಮಹತ್ವದ ಸತ್ಯ ಗೋಪಾಲ ಕೃಷ್ಣನ ಚಿತ್ತಫಲಕದಮೇಲೆ ಸುಳಿಯಿತು. ' ಮಗುವನ್ನು ಕಂಡರೆ ನನಗೆ ತುಂಬ ಮಮತೆಯಿತ್ತು. ಅದಕ್ಕಾಗಿ ನಾನು ಬಯಸಿದ್ದೆ. ಅದರ ನಿಷ್ಕಲ್ಮಷ ಮುಖ, ಸ್ನಿಗ್ಧಸೌಂದರ್ಯ, ನಿರ್ಹೇತುಕ ಮಂದ ಹಾಸಗಳನ್ನು ಕಂಡು ಸ್ವರ್ಗತುಲ್ಯವಾದ ಆನಂದವನ್ನನುಭವಿಸುತ್ತಿದ್ದೆ. ಅವಳು, ಮಗುವಿನ ತಾಯಿಯಲ್ಲವೇ ? ಮಗುವಿಗಾಗಿ ಅವಳು ಹಂಬ ಲಿಸಲಿಲ್ಲವೇ ? ಅದಕ್ಕಾಗಿ ಬೇನೆಯನ್ನನುಭವಿಸಲಿಲ್ಲವೇ ? ಮಗುವಿಗಾಗಿ ತನ್ನ ಸುಖವನ್ನು ಬಲಿದಾನ ಮಾಡಲಿಲ್ಲವೇ ? ಇದೆಂಥ ಅಹಂಕಾರ, ಎಂಥ ಮೌಢ್ಯ ! ಎಂಥ ಅಜ್ಞಾನ ! ತಾಯಿಗಿಲ್ಲದ ನೋವು ನನ ಗೆಲ್ಲಿಂದ ಬಂತು ? ಮಗು ಹೆಚ್ಚುಕಾಲ ಜೀವಿಸಿರುವುದು ಅದರ ಹಣೆ ಯಲ್ಲಿ ಬರೆದಿರಲಿಲ್ಲ. ರುಕ್ಮಿಣಿಗಾದ ಅಪಾರ ಯಾತನೆಯನ್ನು ಲಕ್ಷಿಸದೆ ಅವಳನ್ನೇ ದೂರಿ, ತ್ಯಜಿಸಿದೆನಲ್ಲಾ. ನಾನೆಂಥ ಪಶು '. ಗೋಪಾಲ ಕೃಷ್ಣನಿಗೆ ತನ್ನ ವರ್ತನೆ ಕಂಡು ತಿರಸ್ಕಾರ ಹುಟ್ಟಿತು. ತನಗೇ ಹಿಡಿ ಶಾಪ ಹಾಕಿಕೊಂಡ. ಮಗುವಿನಂತೆ ಅತ್ತುಬಿಟ್ಟ. ಅವನ ಮನಸ್ಸು ಶುಚಿಯಾಯಿತು.

ತನ್ನ ವರ್ತನೆ ತಪ್ಪು, ಎಂದು ನಿರ್ಧಾರವಾದ ಕೂಡಲೆ ಎದ್ದು ನಮ್ಮ ಮನೆಯತ್ತ ಓಡಿ ಬಂದ. ರಾತ್ರಿ ಹನ್ನೊಂದುವರೆ ಗಂಟೆಯಿರ

ಬಹುದು. ನಾನು ಓದುತ್ತ ಕುಳಿತಿದ್ದೆ. ಕಿಟಕಿಯಲ್ಲಿ ಕಂಡ ಅವನ ಮುಖ ನೋಡಿ ಸ್ವಲ್ಪ ಗಾಬರಿಯಾಯಿತು. ಬಾಗಿಲು ತೆಗೆದು ಅವನನ್ನು ಒಳಗೆ ಬರಮಾಡಿಕೊಂಡೆ.

ಗೋಪಾಲಕೃಷ್ಣ ತನ್ನ ವಿಚಾರಲಹರಿಯನ್ನು ನನ್ನ ಮುಂದೆ ನಿವೇದಿಸಿದ. ಪಶ್ಚಾತ್ತಾಪ ಅವನನ್ನು ಪುಟವಿಟ್ಟ ಚಿನ್ನದಂತೆ ಮಾಡಿತ್ತು. ಅವನ ನಿಷ್ಕಲ್ಮಷ ಹೃದಯ ಕಂಡು ಹಿಂದೆ ನನಗಾಗಿದ್ದ ತೇಜೋವಧೆಯೂ ಮರೆತುಹೋಯಿತು.

"ಈಗಲೇ ಮಾವನವರ ಮನೆಗೆಹೋಗಿ ರುಕ್ಮಿಣಿಯ ಕ್ಷಮೆ ಬೇಡುತ್ತೇನೆ" ಎಂದ.

"ಹುಚ್ಚಾ! ಸ್ವಲ್ಪ ಸಮಾಧಾನ ತಂದುಕೋ. ನಡುರಾತ್ರಿ. ಅಲ್ಲಿ ಎಲ್ಲರೂ ಮಲಗಿರುತ್ತಾರೆ. ಈ ಹೊತ್ತಿನಲ್ಲಿ ಅವರನ್ನೇಕೆ ಎಬ್ಬಿಸುವೆ. ಬೆಳಿಗ್ಗೆ ಹೋಗುವೆಯಂತೆ."

ಎಂದು ಸಮಾಧಾನ ಹೇಳಿದೆ. ಅವನು ಮನೆಗೆ ಹೋಗಲು ಬಿಡದೆ ನನ್ನ ರೂಮಿನಲ್ಲಿಯೇ ಮಲಗಲು ವ್ಯವಸ್ಥೆಮಾಡಿದೆ.

ರಾತ್ರಿಯೆಲ್ಲಾ ಗೋಪಾಲಕೃಷ್ಣನಿಗೆ ನಿದ್ದೆಯಿಲ್ಲ. ಘಂಟೆ ಘಂಟೆಗೂ ಎದ್ದು ಗಡಿಯಾರ ನೋಡುತ್ತಿದ್ದ. ಅವನ ತಳಮಳ ನೋಡಲಾರದೆ ನಾನು ಆರು ಗಂಟೆಗೇ ಎದ್ದು ಅವನಿಗೆ ಸ್ನಾನ, ಫಲಹಾರ ಮಾಡಿಸಿ ಕಳಿಸಿಕೊಟ್ಟೆ.

ಈ ಪ್ರಕರಣ ನಡೆದು ಒಂದು ವರ್ಷದ ಮೇಲಾಯಿತು. ರುಕ್ಮಿಣಿ ಈಗ ಬಾಣಂತಿ. ಚಿನ್ನದ ಗೊಂಬೆಯು ಹಾಗಿರುವ ಮಗುವಿನ ತಾಯಿ.

"ಏನು ಗೋಪಾಲೂ, ತಂಗಿಯನ್ನು ಮತ್ತೆ ತೌರುಮನೆಗೆ ಅಟ್ಟಿ ಬಿಡುತ್ತೀಯೋ ?"

ಎಂದೊಮ್ಮೆ ಪರಿಹಾಸ್ಯಮಾಡಿದೆ. ಗೋಪಾಲಕೃಷ್ಣನ ಮುಖ ಚಿಕ್ಕದಾಯಿತು.

"ಆತುರಗಾರನಿಗೆ ಬುದ್ಧಿ ಮಟ್ಟ ಎಂದು ನನ್ನ ತೀರ್ಥರೂಪರು ಹೇಳುತ್ತಿದ್ದುದು ನಿಜ" ಎಂದ.

---

# ಗೌರಿ ನಕ್ಕಳು

ಸಾಹಿತ್ಯಲೋಕದಲ್ಲಿ ಸುಂದರಮೂರ್ತಿಯ ಹೆಸರು ಕೇಳದಿದ್ದವರು ವಿರಳ. ಅವನ ಕಥೆ, ಕಾದಂಬರಿ, ನಾಟಕಗಳು ಮನೆ ಮಾತಾಗಿದ್ದವು. ತಿಳಿದವರು ಅವನನ್ನು ಸಾಹಿತ್ಯ ಸವ್ಯಸಾಚಿಯೆಂದೂ ಕರೆಯುತ್ತಿದ್ದರು. ವಿಜ್ಞಾನದಿಂದ ಅಧ್ಯಾತ್ಮದ ರಹಸ್ಯವಾದದವರೆಗೆ ಅವನಿಗೆ ಕರತಲಾ ಮಲಕ. ಗೀತೆ, ಬೈಬಲ್, ಖುರಾನ್ ಗ್ರಂಥಗಳ ಮೇಲೆ ಅವನು ಅಧಿಕಾರವಾಣಿಯಿಂದ ಮಾತನಾಡಬಲ್ಲವನಾಗಿದ್ದ.

ಅವನ ವಿಚಾರಸರಣಿಯನ್ನು ನೋಡಿ ಕೆಲವರು ಅವನನ್ನು ಹುಚ್ಚನೆಂತಲೂ ಭಾವಿಸುತ್ತಿದ್ದರು. 'ಹೌದು, ಯಾವದರಲ್ಲಿ ಉತ್ಕಟಾ ಸಕ್ತಿ ತೋರಿದರೂ ಅದು ಹುಚ್ಚೇ' ಎಂದು ಸುಂದರಮೂರ್ತಿ ಸಮಾ ಧಾನ ಹೇಳುತ್ತಿದ್ದ.

ಸುಂದರಮೂರ್ತಿ ಉತ್ಕೃಷ್ಟ ವ್ಯಕ್ತ್ಯವಾಗಿದ್ದುದಲ್ಲದೆ ಪ್ರಸಿದ್ಧ ಮಾತುಗಾರನೂ ಆಗಿದ್ದ. ಅವನು ಮಾತಿಗೆ ನಿಂತರೆ—ಅದೂ ಅವನ ಪ್ರಿಯ ವಿಷಯದ ಮೇಲೆ ಹರಟೆಹೊಡೆಯಲಾರಂಭಿಸಿದರೆ ಗಂಟೆಗಳು ಉರುಳಿ ಹೋಗುತ್ತಿದ್ದವು. ರಸ್ತೆಯ ಬದಿಯಲ್ಲೋ, ದೀಪದ ಕಂಬದ

ಕೆಳಗೋ ನಿಂತು ಗಂಟೆಗಟ್ಟಲೆ ಮಾತನಾಡಿ ಎಲ್ಲ ಶ್ರಾವಕರನ್ನೂ ಮನೆಗೆ ಕಟ್ಟಿಕೊಂಡು ಹೋಗುತ್ತಿದ್ದ. ಅವನೂ ಅವನ ಗೆಳೆಯರೂ ಬಂದಹೊತ್ತು ಎಷ್ಟೇ ಆಗಿರಲಿ ಪಾರ್ವತಿ ಅವರಿಗೆ ಆಗ ಬಿಸಿಯಾಗಿ ಅಡಿಗೆಮಾಡಿ ಹಾಕಬೇಕಾಗಿತ್ತು. ಧರಿತ್ರಿಯಂತೆ ಸಹನಾಶೀಲೆ ಪಾರ್ವತಮ್ಮ. ಬಹು ದುಃಖವನ್ನು ಕಂಡುಂಡಿದ್ದ ಜೀವ. ನೋವಿನಿಂದ ನಲುಗಿ ನವುರಾಗಿತ್ತು ಆಕೆಯ ದೇಹ— ಆದರೆ ಮನಸ್ಸು ಅದೇ ಅಚ್ಚಳಿಯದ ಚಿರಯೌವನಕ್ಕೆ ಮೀಸಲಾಗಿತ್ತು. ಗಂಡನ ವಕ್ರ ಆಚರಣೆ ಅವಳನ್ನು ಹಿಂಡಿತ್ತು. ಆದರೆಂದಿಗೂ ಆ ಬಗ್ಗೆ ಪ್ರಸ್ತಾಪಮಾಡಳು. ಅವನ ಮನಸ್ಸಿಗೆ ಎಳ್ಳಷ್ಟು ನೋವುಕೊಡದ ವಿಶಿಷ್ಟ ಜೀವನ ಅವಳದು.

ಒಮ್ಮೊಮ್ಮೆ ಸುಂದರಮೂರ್ತಿ ಹೆಂಡತಿಗೆ ವಿಚಿತ್ರ ಪರಿಸ್ಥಿತಿಯನ್ನು ತಂದೊಡ್ಡುತ್ತಿದ್ದ. ರಾತ್ರಿ ಹನ್ನೆರಡು ಒಂದು ಗಂಟೆಗೆ ನಾಲ್ಕಾರು ಗೆಳೆಯರನ್ನು ಕರೆತಂದು 'ಅಡಿಗೆಮಾಡಿ ಬಡಿಸು' ಎಂದು ಹೇಳುತ್ತಿದ್ದಾಗ ಅವನಿಗೆ ಒಳಗೆ ದಿನಸು ಏನಿದೆಯೆಂಬ ಕಲ್ಪನೆ ಬಾರದು.

"ನನಗೇನು ಗೊತ್ತು—ಇವರೆಲ್ಲರನ್ನೂ ನೀವು ಕರೆದುಕೊಂಡು ಬರುವುದು. ಮನೆಯಲ್ಲಿರುವ ಅಕ್ಕಿಕಾಳು ನಾಳೆ ಬೆಳಿಗ್ಗೆ ಒಪ್ಪೊತ್ತಿಗಾಗುತ್ತದೆ."

"ನನಗೆ ಊಟ ಇಟ್ಟಿರುವೆಯೊ ಇಲ್ಲವೋ ?"

"ನಿಮಗಿಲ್ಲದಿರುತ್ತದೆಯೇ ?"

"ಹಾಗಾದರೆ ಸ್ವಲ್ಪ ಅವಲಕ್ಕಿ ಇದೆ ತಾನೇ."

"ಇದೆ."

"ಅವಲಕ್ಕೀಗೆ ಒಗ್ಗರಣೆ ಹಾಕು. ಇರೋ ಅನ್ನ ಮೊಸರಿನಲ್ಲಿ ಕಲಸಿ ಎಲ್ಲರಿಗೂ ಒಂದೊಂದು ತುತ್ತು ಬಡಿಸು. ನೆಂಚಿಕೊಳ್ಳುವುದಕ್ಕೆ ಉಪ್ಪಿನಕಾಯಿ ಇದ್ದೇ ಇದೆ."

ಇದನ್ನೇ ಬಂದು ಗೆಳೆಯರಿಗೆ ತಿಳಿಸಿ ನಗುನಗುತ್ತಾ- ಅವರಿಗೆ ಅವಲಕ್ಕಿ, ಮೊಸರನ್ನ ತಿನ್ನಿಸಿ ಕಳುಹಿಸುತ್ತಿದ್ದ.

ಒಮ್ಮೊಮ್ಮೆ ತುಂಬ ವಿಚಾರಪರವಶಳಾಗಿ ಪಾರ್ವತಿ ಕೇಳು ತ್ತಿದ್ದಳು.

"ಹೀಗೇ ಆದರೆ ಹೇಗೆ? ನಾಳಿಗೇನು ನಾಳಿದ್ದಿಗೇನು ಎಂದು ಯೋಚನೆ ಮಾಡುವ ಸ್ಥಿತಿ ಪರಿಹಾರವಾಗುವುದು ಯಾವಾಗ?"

"ನೋಡು ಪಾರೂ, ಗೌರಿ ಇಚ್ಛೆಹೇಗಿದೆಯೋ ಹಾಗಾಗುತ್ತದೆ. ಇದುವರೆಗೆ ಅನ್ನಹಾಕಿ ಅವಳು ನಮ್ಮನ್ನು ಕಾಪಾಡಿಕೊಂಡು ಬಂದಿದ್ದಾಳೆ. ಅದು ಅವಳ ಜವಾಬ್ದಾರಿ. ನಾವೇಕೆ ಅವಳ ಮೇಲೆ ಒತ್ತಾಯ ಹೂಡಬೇಕು."

ಎಂದು ಸಮಾಧಾನ ಹೇಳುತ್ತಿದ್ದ. ಸುಂದರಮೂರ್ತಿಗೆ ಗೌರಿಯಲ್ಲಿ ಅಚಲ ನಂಬಿಕೆ. ಅವನು ಹತ್ತುವರ್ಷಗಳಿಂದ ಎಂಥ ಕಷ್ಟಗಳು ಬಂದರೂ ಬಿಡದೆ—ಗೌರಿ ಉಪಾಸನೆ ಮಾಡಿಕೊಂಡು ಬಂದಿದ್ದ. ಗೌರಿಯೇ ತಮ್ಮನ್ನು ಕಾಪಾಡುತ್ತಿರುವುದು ಎಂಬ ಅಚಲ ನಂಬಿಕೆ ಅವನ ಹೃದಯದಲ್ಲಿ ನೆಲಸಿತ್ತು.

ಗೌರಿ ಸುಂದರನ ಭಾಗಕ್ಕೆ ನಿರ್ಜೀವ ವಿಗ್ರಹವಾಗಿರಲಿಲ್ಲ. ಜೀವಂತ ತಾಯಿಯಾಗಿದ್ದಳು. ತನ್ನ ದುಃಖ ಸಂಕಟಗಳನ್ನು ಆಕೆಯ ಮುಂದೆ ತೋಡಿಕೊಳ್ಳುತ್ತಿದ್ದ. ಯಾವ ಕೆಲಸಮಾಡಬೇಕಾದರೂ ಗೌರಿಯ ಅನುಮತಿ ಪಡೆಯದೆ ಕೈ ಹಾಕುತ್ತಿರಲಿಲ್ಲ.

ಸುಂದರಮೂರ್ತಿ ಪರೀಕ್ಷೆಗಳನ್ನು ಪ್ಯಾಸುಮಾಡುವ ಗೋಜಿಗೆ ಹೋಗಲಿಲ್ಲ. ಡಿಗ್ರಿ ಸಂಪಾದನೆಯನ್ನು ವಿದ್ಯಾರ್ಜನೆಗೆ ಬಲಿದಾನವಾಗಿ ಅರ್ಪಿಸಿದ್ದ. ಸಾಹಿತ್ಯದಲ್ಲಿ ಉಚ್ಚಸ್ಥಾನ ಪಡೆದಿದ್ದರೂ ನಿತ್ಯಜೀವನ ಸಾಗುವುದು ಕಷ್ಟವಾಗಿತ್ತು. ಪ್ರಕಾಶಕರ ಮರ್ಜೀ ಹಿಡಿಯಬೇಕಾಗಿತ್ತು. ಕೊಡಬೇಕಾಗಿದ್ದ ಹಣವನ್ನವರು ಸಕಾಲಕ್ಕೆ ಕೊಡುತ್ತಿರಲಿಲ್ಲ. ಪ್ರಕಾಶಕರಿಗೂ ಕಷ್ಟವೆಂದುಕೊಂಡು ಸುಂದರಮೂರ್ತಿ ಸಮಾಧಾನ ತಂದುಕೊಳ್ಳುತ್ತಿದ್ದ. ಪರ್ಮಿಟ್ ಪದ್ಧತಿ ಜಾರಿಗೆ ಬಂದು ಅಂಗಡಿಗಳಲ್ಲಿ ಪುಸ್ತಕ ಮುದ್ರಣಕ್ಕೆ ಸಾಕಾದಷ್ಟು ಕಾಗದ ಸಿಕ್ಕುತ್ತಿರಲಿಲ್ಲ. ಕಾಳಸಂತೆಯಲ್ಲಿ ಕೊಂಡು ಕಾಗದ ಉಪಯೋಗಿಸುವುದಕ್ಕೆ ಪ್ರಕಾಶಕರು ಅಂಜುತ್ತಿದ್ದರು. ಗ್ರಂಥಕರ್ತರೇ ಪರ್ಮಿಟ್ ಒದಗಿಸಿಕೊಂಡು ತಮಗೆ ದೊರೆತ

ಕಾಗದವನ್ನು ಪ್ರಕಾಶಕರಿಗೆ ಕೊಟ್ಟು ತಮ್ಮ ಗ್ರಂಥಗಳ ಪ್ರಕಟನೆಗೆ ದಾರಿ ಮಾಡಿಕೊಡಬೇಕಾಗಿತ್ತು.

ಮುದ್ರಣ ಕಾಗದಕ್ಕೆ ಸರ್ಕಾರ ನಿರ್ಧರಿಸಿದ್ದ ಬೆಲೆ ಪೌಂಡಿಗೆ ಎಂಟೂವರೆ ಆಣೆ. ಕಾಳಸಂತೆಯಲ್ಲಿ ಅದರ ಬೆಲೆ ಒಂದೂಮುಕ್ಕಾಲು ರೂಪಾಯಿವರೆಗೆ ಏರಿತು. ಮದರಾಸು, ಮುಂಬಯಿಗಳ ಪ್ರಕಾಶಕರು ಬಂದು ದೊರೆಯುತ್ತಿದ್ದ ಕಾಗದವನ್ನು ಮನಸ್ವೀ ಧಾರಣೆಕೊಟ್ಟು ಕೊಳ್ಳುತ್ತಿದ್ದರು. ಗ್ರಂಥಕರ್ತರು ಮತ್ತು ಊರಿನ ಪ್ರಕಾಶಕರು ಕಾಗದವನ್ನು ಅಚ್ಚಿಗೆ ಕೊಟ್ಟು, ಗ್ರಂಥ ಪ್ರಕಟಿಸಿ, ಆದರ ಕಷ್ಟಸುಖ ಗಳನ್ನು ಹೆಗಲಿನಮೇಲೆ ಹೊತ್ತು, ಮಾರಾಟಕ್ಕೆ ಪಿಕಿಪಿಕಿ ಎಂದು ಕಣ್ಣುಬಿಡುತ್ತಾ ಕೂಡುವುದಕ್ಕಿಂತ ಮದರಾಸು ಪ್ರಕಾಶಕರಿಗೆ ಕಾಗದ ಮಾರಿ ಕೈಮೇಲೆ ನಾಲ್ಕುಕಾಸು ಹಾಕಿಕೊಳ್ಳುವುದೇ ಉತ್ತಮವೆಂದು ಭಾವಿಸಿದರು. ಹಾಗೆ ಹಣಮಾಡಿದ ಕೆಲವು ಗ್ರಂಥಕರ್ತರು ಸುಂದರ ನಿಗೂ ಉಪದೇಶಮಾಡಿದರು. ತಮ್ಮ ಗ್ರಂಥಪ್ರಕಟನೆಗೆ ತೆಗೆದುಕೊಂಡ ಕಾಗದವನ್ನು ಕಾಳಸಂತೆಯಲ್ಲಿ ಮಾರುವುದು ಅನೀತಿ—ಅಧರ್ಮವೆಂದು ಸುಂದರನ ನಂಬಿಕೆಯಾಗಿತ್ತು. ತನ್ನ ಗ್ರಂಥ ಪ್ರಕಟವಾಗಿ ಅದು ನ್ಯಾಯವಾಗಿ ಕೊಡುತ್ತಿದ್ದ ನಾಲ್ಕೇ ಕಾಸುಗಳಲ್ಲಿ ಅವನಿಗೆ ಹೆಚ್ಚು ತೃಪ್ತಿಯಾಗುತ್ತಿತ್ತು.

ಆದರೆ ಆ ನಾಲ್ಕುಕಾಸೂ ಸಕಾಲಕ್ಕೆ ಒದಗುತ್ತಿರಲಿಲ್ಲ. ಸುಂದರನ ಜೀವನದಲ್ಲಿ ನಿರ್ಧಾರವಾದ ಯಾವ ವರಮಾನಕ್ಕೂ ದಾರಿಯಿರಲಿಲ್ಲ. ಹತ್ತುರೂಪಾಯಿ ಹೆಚ್ಚಿಗೆ ಸಿಕ್ಕಿದ ದಿನ ಮನೆಮುಂದಿಗೆಲ್ಲಾ ಹೋಳಿಗೆ ಮಾಡಿಸಿ ಹಾಕುತ್ತಿದ್ದ. ದುಡ್ಡಿಲ್ಲದ ದಿನ ರಾಗಿ ಮುದ್ದೆಯಲ್ಲೇ ತೃಪ್ತ ನಾಗುತ್ತಿದ್ದ.

ಸುಂದರಮೂರ್ತಿಯ ಜೀವನವನ್ನು ಹಿಡಿದು ಅಲುಗಾಡಿಸುವಂಥ ಪ್ರಸಂಗಗಳೊದಗುತ್ತಿದ್ದವು. ಅವು ಹೇಗೋ ಪಾರಾಗುತ್ತಿದ್ದವು.

ಯುದ್ಧ ಒದಗಿತು. ಸಾಮಾನುಗಳ ಬೆಲೆ ಒಂದಕ್ಕೆ ನಾಲ್ಕಾ ಯಿತು. ಮನೆಯವನು ಬಾಡಿಗೆಯನ್ನೇರಿಸಿದ. ಬಟ್ಟೆಯನ್ನು ಕೊಳ್ಳು ವುದು ಕನಸಿನ ಮಾತಾಯಿತು. ಪಾರ್ವತಿ ಒಂಭತ್ತು ಮೊಳದ ಸೀರೆ

ಬಿಟ್ಟು ಆರುಮೊಳದ ಸೀರೆ ಉಡಲಾರಂಭಿಸಿದ್ದಳು. ಉಡುತ್ತಿದ್ದ ಸೀರೆಗೂ ನೂರೆಂಟು ತೇಪೆ. ಅಕ್ಕಿ ಧಾರಣೆ ಏರುತ್ತ ಹೋಯಿತು. ರೇಷನ್ನಿನಲ್ಲಿ ಕೊಡುತ್ತಿದ್ದುದು ಹದಿನೈದು ದಿನಕ್ಕೆ ಸಾಲುತ್ತಿರಲಿಲ್ಲ. ಉಳಿದ ದಿನಗಳ ದವಸವನ್ನು ಕಾಳಸಂತೆಯಲ್ಲಿ ಕೊಳ್ಳಬೇಕಾಗಿತ್ತು ರೂಪಾಯಿಗೆ ಒಂದು ಸೇರಿನಂತೆ. ಅದಕ್ಕೆ ಕೈಯಲ್ಲಿ ಕಾಸಿಲ್ಲ. ಸುಂದರ ಮೂರ್ತಿ ಗೌರಿಯ: ಹೆಸರಿನಲ್ಲಿ ಒಪ್ಪತ್ತು ಊಟ ಮಾಡುವುದಕ್ಕಾರಂಭಿಸಿದ. ಬೇಡವೆಂದರೆ ಕೇಳದೆ ಪಾರ್ವತಿಯೂ ಅದೇ ವ್ರತ ಕೈಗೊಂಡಳು. ಗಂಡಹೆಂಡತಿ ಒಂದು ಹೊತ್ತು ಊಟಮಾಡಿ ಮಕ್ಕಳಿಗೆ ಹೊಟ್ಟೆತುಂಬ ಅನ್ನ ಹಾಕಲು ಹವಣಿಸುತ್ತಿದ್ದರು. ತುಪ್ಪ ಕಂಡ ದಿನವೇ ದೊಡ್ಡ ಹಬ್ಬ. ತರಕಾರಿ, ಹಣ್ಣುಗಳನ್ನು ಅಂಗಡಿಗಳಲ್ಲಿ ನೋಡಿಯೇ ತೃಪ್ತಿ.

ಇಂಥ ಪರಿಸ್ಥಿತಿಯಲ್ಲಿಯೂ ಸುಂದರಮೂರ್ತಿ ಕಂಡವರ ಬಳಿಗೆ ಹೋಗಿ ಕೈಯೊಡ್ಡಲಾರ. ಅವನ ಸ್ವಾಭಿಮಾನ ಅವನಿಗೇ ಕುತ್ತಾಗಿತ್ತು. 'ಇದು ಕೊಡುವ ಕೈಯೇ ವಿನಾ ತೆಗೆದುಕೊಳ್ಳುವ ಕೈಯಲ್ಲ' ಎಂದವನು ಹೇಳುತ್ತಿದ್ದ.

ಅದೇ ವರ್ಷ ಸುಂದರಮೂರ್ತಿಯ ಮೆಚ್ಚಿನ ಮಗ ಆರು ವರ್ಷದ ಶಂಕರ ತೀರಿಕೊಂಡ. 'ಅನೀಮಿಯಾ' ಎಂದು ಡಾಕ್ಟರು ಹೇಳಿದರು ಅವನನ್ನು ನಾಲ್ಕು ವರ್ಷದ ವೆಂಕಟಾಚಲ ಹಿಂಬಾಲಿಸಿದ. ಅದಕ್ಕೆ 'ಆಕ್ಯೂಟ್ ಅನೀಮಿಯಾ' ಎಂದು ಡಾಕ್ಟರು ಹೇಳಿದರು. ಸುಂದರನ ಮಂದಹಾಸ ಮಸುಕಾಗುತ್ತ ಬಂತು. ಗ್ರಹ ಹಿಡಿದವನಂತೆ ಒಬ್ಬನೇ ಕುಳಿತು ಚಿಂತಿಸುತ್ತಿದ್ದ. ಬೇಸರವಾದರೆ ಎದ್ದು ಲಾಲ್‌ಬಾಗಿನಲ್ಲಿ ತಿರುಗಾಡಿಕೊಂಡು ಬರುತ್ತಿದ್ದ.

ಎರಡು ಮಕ್ಕಳನ್ನು ಹಸಿವಿನ ಹೆಮ್ಮಾರಿಗೆ ಬಲಿಕೊಟ್ಟುದು ಪಾರ್ವತಮ್ಮನ ಮನಸ್ಸಿನಿಂದ ಅಳಿಸಿ ಹೋಗಲಿಲ್ಲ. ವೆಂಕಟಾಚಲ ತೀರಿಕೊಂಡಾಗ ಆಕೆ ಆರು ತಿಂಗಳ ಬಸುರಿ. ಮಕ್ಕಳಿಗಾಗಿ ಅತ್ತು ಅತ್ತು ಪಾರ್ವತಮ್ಮ ಹಾಸಿಗೆ ಹಿಡಿದು ಮಲಗಿಬಿಟ್ಟಳು. ಮನೆಗೆಲಸವನ್ನೆಲ್ಲಾ ದೊಡ್ಡಮಗಳು ಗಿರಿಜಾ ಮಾಡಬೇಕಾಗಿತ್ತು. ಸುಂದರಮೂರ್ತಿಗೆ ದಿಕ್ಕೇ ತೋರದಂತಾಯಿತು.

ಮಧ್ಯರಾತ್ರಿಯಾದರೂ ಅವನು ಉಪಾಸನೆ ಬಿಟ್ಟೇಳುತ್ತಿರಲಿಲ್ಲ. ಗೌರಿಯ ಮುಂದೆ ಪದ್ಮಾಸನ ಹೂಡಿ, ಜಿಂಕೆಯ ಚರ್ಮದ ಮೇಲೆ ತದೇಕಚಿತ್ತನಾಗಿ ಕುಳಿತುಬಿಡುತ್ತಿದ್ದ. ತಾಯಿದೇವಿಗೆ ಕಣ್ಣೀರಿನ ಅಭಿಷೇಕ.

"ಅಮ್ಮಾ... ಪಾರುವನ್ನು ಇಷ್ಟು ಬೇಗ ಕರೆದುಕೊಂಡು ಹೋಗ ಬೇಡ." ಎಂದು ಅವನ ಅಂತರಾತ್ಮ ಮೊರೆಯುತ್ತಿತ್ತು.

ಡಾಕ್ಟರು ರೋಗಿಯನ್ನು ಪರೀಕ್ಷಿಸಿ ಔಷಧಗಳ ಪಟ್ಟಿ, ಇಂಜ ಕ್ಷನ್‌ಗಳ ವಿವರ ತಿಳಿಸಿದರು. ಕೊನೆಯ ಪಕ್ಷ ನೂರು ರೂಪಾಯಿ ಕೈಯಲ್ಲಿಟ್ಟುಕೊಂಡ ಹೊರತೂ ಚಿಕಿತ್ಸೆ ಆರಂಭಿಸಲು ಸಾಧ್ಯವಿರಲಿಲ್ಲ. ಸುಂದರಮೂರ್ತಿ ಪ್ರಕಾಶಕರ ಮನೆ ಮನೆ ಅಲೆದ. ಅವರು ಮುಂದಿನ ತಿಂಗಳ ಗಡು ಹಾಕಿದರು. ಸುಂದರಮೂರ್ತಿಯ ಚಿಂತೆಗೆ ಕೊನೆ ಮೊದಲಿಲ್ಲವಾಯಿತು.

"ಇದಕ್ಕೇನು ಮಾರ್ಗ. ಹೊಟ್ಟೆಗೆ ಸರಿಯಾಗಿ ಹಾಕದೆ ಎರಡು ಮಕ್ಕಳನ್ನು ಬಲಿಗೊಟ್ಟೆ. ಈಗ ಚಿಕಿತ್ಸೆಮಾಡಿಸದೆ ತುಂಬಿದ ಬಸುರಿ ಪಾರುವನ್ನು ಕೈಯಾರೆ ಕೊಲ್ಲಲೇ?" ಎಂದು ಯೋಚಿಸಿದ.

ಪಾರ್ವತಿಯ ಸ್ಥಿತಿ ದಿನೇ ದಿನೇ ಚಿಂತಾಜನಕವಾಗುತ್ತ ಬಂತು. ಜ್ವರ ಇದ್ದಕ್ಕಿದ್ದಂತೆ ಏರಿ ತಕ್ಷಣ ಇಳಿದು ಹೋಗುತ್ತಿತ್ತು. ದುಃಖ ದಿಂದ ವಿಚಾರಶೂನ್ಯನಾದ.

ಒಂದು ದಿನ ವಿಚಾರ ಮಾಡುತ್ತಿರುವಂತೆ ಒಂದು ಯೋಚನೆ ಹೊಳೆಯಿತು. ಹೌದು! ಅದರಲ್ಲಿ ಪರಿಹಾರವಿತ್ತು. ಆದರೆ ಇಷ್ಟು ದಿನ ಕಾದುಕೊಂಡ ಶೀಲವನ್ನು ಒಂದರಗಳಿಗೆಯಲ್ಲಿ ನಾಶಮಾಡಿಬಿಡು ವುದೇ? ಯಾವದು ಮಹಾಪಾಪವೆಂದು ತಾನು ನಂಬಿ, ಸಾರಿದ್ದನೋ ಅದನ್ನು ತಾನೇ ಆಚರಿಸುವುದೇ?... ಆದರೆ ಪಾರ್ವತಿಯ ಗತಿ!!

ಈ ಯೋಚನೆಯನ್ನು ಮನಸ್ಸಿನಿಂದ ಹೊರಗಿಡಲು ಸುಂದರ ಮೂರ್ತಿ ವಿಶ್ವಪ್ರಯತ್ನ ಮಾಡಿದ ಅದು ನಾಕಿದ ನಾಯಿಯಂತೆ

ಅವನನ್ನೇ ಅನುಸರಿಸುತ್ತಿತ್ತು. ಪದೇ ಪದೇ ಅವನನ್ನಲುಗಿಸಿ 'ಇದೇ ಮಾರ್ಗ — ಈ ಮಾರ್ಗ ಬಿಡಬೇಡ' ಎಂದು ಒತ್ತಾಯಮಾಡುತ್ತಿತ್ತು.

ಪಾರ್ವತಿ ಮೈಮೇಲೆ ಪ್ರಜ್ಞೆಯಿಲ್ಲದೆ ಮಲಗಿಬಿಟ್ಟಳು. ಒಂದು ರಾತ್ರಿ ಸುಂದರಮೂರ್ತಿ ಗೌರಿಯ ಮುಂದೆ ಕುಳಿತು ಹೇಳಿದ.

"ಅಮ್ಮಾ... ನನ್ನ ತಳಮಳ ಬಲ್ಲವಳು ನೀನೊಬ್ಬಳೇ. ನಿನಗೂ ಕರುಣೆ ಬರಲಿಲ್ಲ. ಶೀಲಕ್ಕಾಗಿ ನಾನು ಪಾರ್ವತಿಯನ್ನು ಬಲಿದಾನ ಒಪ್ಪಿಸಲಾರೆ. ನಾಳೆ ಬೆಳಿಗ್ಗೆ ಏನಾದರೂ ಸಹಾಯ ಒದಗಿದರೆ ಸರಿ — ಇಲ್ಲವಾದರೆ ನಾನು ಮಾಡಬಾರದುದನ್ನು ಮಾಡಿಯೆ ತೀರಬೇಕು. ಅಮ್ಮಾ... ನಿನ್ನನ್ನು ಅಂಗಲಾಚಿ ಬೇಡಿಕೊಳ್ಳುತ್ತೇನೆ. ನಿನ್ನ ಬೆಳ್ಳಿಯ ಬೆಟ್ಟದಿಂದ ನನ್ನನ್ನು ಕೆಳಗೆ ತಳ್ಳಬೇಡ."

ಎಂದು ಆರ್ತನಾಗಿ ಬೇಡಿಕೊಂಡ.

ಬೆಳಿಗ್ಗೆ ಯಾರಾದರೂ ಪ್ರಕಾಶಕರು ತಾವಾಗಿಯೇ ಬಂದು ಹಣ ತಂದುಕೊಟ್ಟು ಹೋಗುತ್ತಾರೆಂದು ಅವನ ನಂಬಿಕೆ. ಮಧ್ಯಾಹ್ನಕಾಲ ಮೀರಿತು, ಯಾರ ಸುಳಿವೂ ಇಲ್ಲ

"ಅಣ್ಣಾ. ಊಟಕ್ಕೇಳಿ"

ಎಂದು ಗಿರಿಜಾ ಬಂದು ಹೇಳಿದಳು.

"ನೀನು ಮಾಡು ತಾಯಿ — ನಾನೀಗಲೇ ಬರುವೆ. ಅಮ್ಮನಿಗೆ ಹಾಲು ಕುಡಿಸಿದೆಯಾ?"

"ಸ್ವಲ್ಪ ಕುಡಿಸಿದೆ."

"ನೀನು ಅವಳ ಬಳಿಯಲ್ಲಿಯೇ ಇರು. ನಾನು ಬೇಗ ಬರುತ್ತೇನೆ."

ಎಂದು ಮೈಮೇಲೆ ಟವಲು ಹಾಕಿಕೊಂಡು ನೇರವಾಗಿ ಮದರಾಸಿನ ಪ್ರಕಾಶಕರ ಪ್ರತಿನಿಧಿಯೊಬ್ಬನ ಕಛೇರಿಯ ಬಳಿ ಹೋದ. ಆ ಪ್ರತಿನಿಧಿಯ ಸೂಚನೆಯನ್ನೇ ಹಲವು ಸಲ ಸುಂದರ ನಿರಾಕರಿಸಿದ್ದ. ಈಗ ತನ್ನನ್ನೇ ಹುಡುಕಿಕೊಂಡು ಬಂದ ಸುಂದರಮೂರ್ತಿಯನ್ನು ಕಂಡು ಪ್ರತಿನಿಧಿ ಆಶ್ಚರ್ಯಚಕಿತನಾಗಿ

"ಏನು ಸುಂದರಮೂರ್ತಿಗಳೇ. ಬಹಳ ಅಪರೂಪವಾಗಿ ದಯಮಾಡಿಸಿದಿರಿ."

"ಹೌದು — ಬರಬೇಕಾಯಿತು ಬಂದೆ. ನಿಮ್ಮಿಂದ ಒಂದು ಕೆಲಸವಾಗಬೇಕಾಗಿತ್ತು."

"ಹೇಳಿ — ಅಗತ್ಯವಾಗಿ ಆಗಲಿ."

"ಈಗ ಬಿಳಿಕಾಗದದ ಧಾರಣೆ ಹೇಗಿದೆ."

"ನಿಮಗೆ ಕಾಗದ ಬೇಕಾಗಿತ್ತೇ ... ನಮಗೇ ಬೇಕೆಂದು ನಾನೇ ನಿಮ್ಮನ್ನು ಕೇಳಿದ್ದೆನಲ್ಲಾ."

"ಹೌದು, ನೀವು ಯಾವ ಧಾರಣೆಗೆ ಕೊಳ್ಳಬಲ್ಲಿರಿ."

"ಪೌಂಡಿಗೆ ರೂ. ೧–೧೨–೦ ಕೊಡಲು ನಾವು ಸಿದ್ಧವಾಗಿದ್ದೇವೆ."

"ನನ್ನಲ್ಲಿ ಇಪ್ಪತ್ತು ರೀಮುಗಳ ಕೋಟಾ ಇದೆ — ಇಪ್ಪತ್ತೆಂಟು ಪೌಂಡಿನ ಕಾಗದ."

"ಸರಿ — ಅದಕ್ಕೆಷ್ಟು ಬೇಕು ಹೇಳಿ."

"ಆರುನೂರು ರೂಪಾಯಿ ಕೊಡುವುದಾದರೆ ಕೋಟಾ ನಿಮಗೆ ಕೊಡಬಲ್ಲೆ."

ಪ್ರತಿನಿಧಿ ಮರುಮಾತನಾಡಲಿಲ್ಲ. ಸುಂದರಮೂರ್ತಿ ಕೇಳಿದ ಹಣ ಅವನ ಕೈಗಿತ್ತು ಕೋಟಾ ಪರ್ಮಿಟ್ ತೆಗೆದುಕೊಂಡ.

ಹಣವನ್ನು ಹಿಡಿದು ಸುಂದರಮೂರ್ತಿ ಡಾಕ್ಟರ ಮನೆಗೆ ಓಡಿದ. ಅವರನ್ನು ಕರೆದುಕೊಂಡು ಪಾರ್ವತಿಗೆ ಬೇಕಾದ ಔಷಧ, ಇಂಜೆಕ್ಷನ್ ಟ್ಯೂಬುಗಳನ್ನು ಕೊಂಡ. ಉಳಿದ ಹಣ ತಂದು ಪಾರ್ವತಿಯ ತಲೆ ದಿಂಬಿನ ಕೆಳಗಿಟ್ಟ.

ಒಂದೆರಡು ವಾರದ ಚಿಕಿತ್ಸೆಯಿಂದ ಪಾರ್ವತಿಗೆ ಗುಣಮುಖ ವಾಯಿತು. ಜ್ವರ ನಿಂತಿತು. ಗರ್ಭಪಾತವಾಗಲಾರದು ಎಂದು ಡಾಕ್ಟರು ಭರವಸೆಯಿತ್ತಿದ್ದರು. ಪಾರ್ವತಿ ಸಾವಿನ ಹೊಸಲು ದಾಟಿ ದ್ದಳು.

ಪಾರ್ವತಿಗೆ ಗುಣಮುಖವಾದದ್ದನ್ನು ಕಂಡು ಸುಂದರಮೂರ್ತಿ ಹಿಗ್ಗಿದ. ಆದರೆ ಅವನ ಮನಸ್ಸು ಬೆಂದುಹೋಗಿತ್ತು. 'ನಾನೆಷ್ಟ

ರವನು — ನಾನು ಒಬ್ಬ ಕಾಳಸಂತೆಕೋರ' ಎಂದು ಶಪಿಸಿಕೊಂಡ. ಗೌರಿ ಅವನನ್ನು ನೋಡಿ ನಕ್ಕಳು.

ಗೌರಿಯನ್ನು ದುರುಗುಟ್ಟಿಕೊಂಡು ನೋಡಿದ.

"ನನ್ನ ಇಷ್ಟು ದಿನದ ನಿಷ್ಠೆಗೆ, ಭಕ್ತಿಗೆ ಇದೇಯೇ ನೀನು ಕೊಟ್ಟ ವರ" ಎಂದು ಕೇಳಿದ.

ಗೌರಿ ನಕ್ಕಳು.

ಸುಂದರ ವಿಸ್ಮಯಗೊಂಡು ಗೌರಿಯ ಮುಖವನ್ನು ಮತ್ತೆ ದಿಟ್ಟಿಸಿ ನೋಡಿದ.

"ನಗು – ನಗು, ಪರೀಕ್ಷೆಯಲ್ಲಿ ಪರಾಜಯಗೊಂಡ ನನ್ನನ್ನು ಅವಹೇಳನ ಮಾಡು." ಎಂದ.

ಗೌರಿ ನಕ್ಕಳು.

"ತಾಯೀ – ನಾನು ಪಾಪ ಮಾಡಿಲ್ಲ. ನಾನು ಕಾಳಸಂತೆ ಕೋರನಲ್ಲ. ನಾನು ಹಾಗೆ ಮೊದಲಿನಿಂದ ಮಾಡಿಕೊಂಡು ಬಂದಿದ್ದರೆ ಇಂದು ನಾಲ್ಕಾರು ಸಾವಿರ ರೂಪಾಯಿ ಕೂಡಿಸುತ್ತಿದ್ದೆ. ...ಆದರೀಗ ಆಪದ್ಧರ್ಮವನ್ನು ವಿಧಿಯಿಲ್ಲದೆ ಪರಿಪಾಲಿಸಿದೆ. ನನ್ನ ಶೀಲಕ್ಕೆ ಪಾರ್ವತಿಯನ್ನು ಬಲಿ ಕೊಡಲಾರದೆ ನಾನು ಪತಿತನಾದೆ. ಚಿಂತೆಯಿಲ್ಲ ನನ್ನನ್ನು ಪಾರ್ವತಿ ಮೇಲಕ್ಕೆತ್ತಬಲ್ಲಳು. ಪ್ರಾಣ ರಕ್ಷಣೆ ಮಾಡಿದುದು ನನ್ನ ತಪ್ಪೇ"

ಎಂದು ಗೌರಿಯನ್ನು ಕೇಳಿದ.

ಗೌರಿ ನಕ್ಕಳು.

---

# ಮನದಲ್ಲಿ ಮಹರ್ಷಿ

ಮಹರ್ಷಿಗಳ ಹೆಸರು ಜಗದ್ವಿಖ್ಯಾತವಾಗಿತ್ತು. ಅವರ ಮೇಲೆ ಅನೇಕರು ಅನೇಕ ಗ್ರಂಥಗಳನ್ನು ಬರೆದಿದ್ದರು. ಮಹರ್ಷಿಗಳನ್ನು ಗೌತಮ ಬುದ್ಧ, ಯೇಸು ಕ್ರಿಸ್ತ, ಶ್ರೀ ರಾಮಕೃಷ್ಣ ಪರಮಹಂಸರಿಗೆ ಹೋಲಿಸಿದ್ದರು. ಫ್ರಾನ್ಸ್, ನಾರ್ವೆ, ಸ್ವೀಡನ್, ಅಮೇರಿಕಾಗಳಿಂದ ಬಂದ ಅನೇಕ ಪ್ರವಾಸಿಗರು, ಜಿಜ್ಞಾಸುಗಳು ಮಹರ್ಷಿಗಳ ಮೇಲೆ ದೇಶ ವಿದೇಶ ಪತ್ರಿಕೆಗಳಲ್ಲಿ ಅದ್ಭುತ ಲೇಖನಗಳನ್ನು ಬರೆದಿದ್ದರು. ಮಹರ್ಷಿಗಳ ಗ್ರಂಥಗಳು ದೇಶಭಾಷೆಗಳಿಗಲ್ಲದೆ ಜರ್ಮನ್, ಫ್ರೆಂಚ್, ಇಂಗ್ಲೀಷ್ ಭಾಷೆಗಳಿಗೂ ಅನುವಾದವಾಗಿದ್ದವು.

ನಾನು ಮಹರ್ಷಿಗಳ ಗ್ರಂಥಗಳನ್ನು ಓದಿದ್ದೆ. ಅವರ ಮೇಲಣ ಲೇಖನ ಗ್ರಂಥಗಳನ್ನೂ ಅಭ್ಯಾಸಮಾಡಿದ್ದೆ. ಅವರ ಕೀರ್ತಿ, ಆಧ್ಯಾತ್ಮಿಕ ಸಾಧನೆ, ತಪೋಮಹಿಮೆಯನ್ನು ನನ್ನ ಭಾರತೀಯ, ವಿದೇಶೀಯ ಮಿತ್ರರ ಬಾಯಿಂದಲೂ ಕೇಳಿದ್ದೆ.

ಕರುಣಾಕರ ಮಹರ್ಷಿಗಳಿಗೆ ಎಂಟನೆಯ ವಯಸ್ಸಿನಲ್ಲೇ ದೈವಾನುಗ್ರಹವಾಯಿತಂತೆ. ಅವರ ಎಂಟನೆಯ ವಯಸ್ಸಿನ ವೈಶಾಖ

ಮಾಸದ ಶುಕ್ಲ ಪಕ್ಷ ಪೌರ್ಣಿಮಾ ರಾತ್ರಿ—ಯಾರೋ ಬಂದು ಹೊಡೆ ದೆಬ್ಬಿಸಿದ ಹಾಗಾಯಿತಂತೆ. ಹುಡುಗ ಎದ್ದು ಹೊರಗೆ ಹೋದ. ನೀಳವಾದ ಗಡ್ಡದ ಒಬ್ಬ ಸನ್ಯಾಸಿ ಹೊರಗೆ ಕಾದಿದ್ದು ಅವರನ್ನು ಕೈಹಿಡಿದು ಕರೆದುಕೊಂಡು ಹೋದ. ಹುಡುಗನಿಗೆ ಮೈಮೇಲೆ ಪ್ರಜ್ಞೆ ಯಿಲ್ಲ. ಸನ್ಯಾಸಿಯುನ್ನು ಮಂತ್ರಮುಗ್ಧನಂತೆ ಅನುಸರಿಸಿದ.

ಬೆಳಿಗ್ಗೆ ಎದ್ದ ಅವನ ತಾಯಿ ತಂದೆ ಅವನನ್ನು ಹುಡುಕಾಡಿದರು. ಕರುಣಾಕರನ ಪತ್ತೆ ಸಿಗಲಿಲ್ಲ. ಊರಿನ ಕೆರೆ ಭಾವಿ ಹುಡುಕಿಸಿದರು. ಸುತ್ತಮುತ್ತಲಿನ ನೆಂಟರಿಷ್ಟರ, ಗೆಳೆಯರ ಮನೆಗೆಲ್ಲಾ ಹೇಳಿ ಕಳು ಹಿಸಿದರು. ಶೋಧನೆ ಸಫಲವಾಗಲಿಲ್ಲ. ಕರುಣಾಕರ ಎಲ್ಲಿ ಹೋದ ಎನ್ನುವುದು ಎಲ್ಲರಿಗೂ ಮಹಾಸಮಸ್ಯೆಯಾಯಿತು.

ಇಪ್ಪತ್ತುನಾಲ್ಕು ವರ್ಷಗಳು ದಾಟಿದವು. ಈ ಅವಧಿಯಲ್ಲಿ ತಂದೆ ತೀರಿಕೊಂಡಿದ್ದರು. ತಾಯಿ ವಯಸ್ಸಿನಿಂದ, ದುಃಖದಿಂದ ಹಣ್ಣು ಹಣ್ಣು ಮುದುಕಿಯಾಗಿದ್ದಳು.

ಉತ್ತರದ ಕಡೆಯಿಂದ ಒಬ್ಬ ಮಹರ್ಷಿಗಳ ಸುದ್ದಿ ಕರುಣಾಕರನ ತಾಯಿಯಿದ್ದ ಪೆರೂರಿಗೂ ಬರುತ್ತಿತ್ತು. ಮಹರ್ಷಿಗಳು ದಕ್ಷಿಣದವರಂತೆ ತಮಿಳು ನಾಡಿನವರಂತೆ—ಮಹಾ ಪ್ರಭಾವಶಾಲಿಗಳು—ಯೋಗ ದೃಷ್ಟರು—ಅವರ ಕಣ್ನೋಟದಿಂದಲೇ ಎಲ್ಲರ ದುಃಖ, ನೋವು, ಸಮಸ್ಯೆಗಳು ಪರಿಹಾರವಾಗುತ್ತವೆ ಎಂದು ಸುದ್ದಿ ಬರುತ್ತಿತ್ತು.

ಕೊಯಿಮುತ್ತೂರಿನ ವರಮಾನ ತೆರಿಗೆ ಇಲಾಖೆಯಲ್ಲಿದ್ದು ವಿರಾಮವೇತನ ಪಡೆಯುತ್ತಿದ್ದ ಕರುಣಾಕರನ ಸೋದರಮಾವ ನಟೇಶ ಅಯ್ಯರ್ ಪೆರೂರಿಗೆ ಬಂದಾಗ ಈ ಸುದ್ದಿಗಳನ್ನೆಲ್ಲಾ ತನ್ನ ಅಕ್ಕನಿಗೆ ತಿಳಿಸುತ್ತಿದ್ದ. ಆಕೆ ಮುಗ್ಧಳಾಗಿ

"ನಟೇಶಾ, ಮಹರ್ಷಿಯೇ ನಮ್ಮ ಕರುಣಾಕರನೇನೋ ?"

ಎಂದು ಕೇಳುತ್ತಿದ್ದಳು. ನಟೇಶ ಅಯ್ಯರ್ ಅಕ್ಕನ ಅಜ್ಞಾನಕ್ಕೆ ನಸುನಗುತ್ತಾ

"ಅಕ್ಕ—ಇಪ್ಪತ್ತುನಾಲ್ಕು ವರ್ಷಗಳಾದವು. ಇನ್ನೆಲ್ಲಿ ಕರುಣಾಕರ. ನಿನಗೆ ಇನ್ನೂ ಭ್ರಾಂತಿ ಹೋಗದಲ್ಲಾ."

" ಹೋಗದಪ್ಪಾ. ಈ ಜೀವವಿರುವರೆಗೆ ಹೋಗದು. ನನ್ನ ಕರುಣಾಕರ ಜೀವಂತನಾಗಿದ್ದಾನೆಂಬ ಭ್ರಾಂತಿ ನನ್ನ ಮನಸ್ಸಿನಿಂದ ಅಳಿದು ಹೋಗುವುದಿಲ್ಲ "

ಎಂದು ಹೇಳುತ್ತಿದ್ದಳು.

ಒಂದು ದಿನ ಮಧ್ಯಾಹ್ನ ಪೆರುಂದೇವಿ ಅಕ್ಕಿ ತೊಳೆದ ನೀರನ್ನು ಹೊರಗಿಟ್ಟಿದ್ದ ಗಡಿಗೆಗೆ ಹಾಕುವುದಕ್ಕೆ ಹೊರಗೆಬಂದಳು. ಎದುರಿಗೆ ತೇಜಸ್ವಿಯಾದ ಒಬ್ಬ ತರುಣ ಸನ್ಯಾಸಿ ನಿಂತಿದ್ದ. ಕಲಗಚ್ಚಿನ ಪಾತ್ರೆ ಕೆಳಗಿಟ್ಟು ಪೆರುಂದೇವಿ ಅವನನ್ನೇ ದಿಗ್ಭ್ರಮೆ ಹಿಡಿದವನಂತೆ ನೋಡುತ್ತ ನಿಂತಳು. ಸನ್ಯಾಸಿ ಕೇಳಿದ.

" ಅಮ್ಮಾ....ಮುತ್ತುಕೃಷ್ಣ ಅಯ್ಯರ್‌ರವರ ಮನೆ ಇದೇನೇ ? "

" ಹೌದು ಸ್ವಾಮಿ " ಎಂದಳು.

" ಅವರ ಕುಟುಂಬ ಪೆರುಂದೇವಿ ಅಮ್ಮಾ ಇದ್ದಾರೆಯೇ ? "

" ನಾನೇ ಸ್ವಾಮೀ....ಪೆರುಂದೇವಿ " ಎಂದಳು.

ಸನ್ಯಾಸಿ ಪೆರುಂದೇವಿಯ ಎರಡು ಪಾದಗಳನ್ನೂ ಹಿಡಿದು ಸಾಷ್ಟಾಂಗ ನಮಸ್ಕಾರ ಮಾಡಿದ. ಪೆರುಂದೇವಿ ಆಶ್ಚರ್ಯಚಕಿತ ಳಾದಳು. ಸನ್ಯಾಸಿ ತನಗೆ ನಮಸ್ಕಾರ ಮಾಡುವುದೆಂದರೇನು ? ಆದರೆ ಮನಸ್ಸಿನಲ್ಲಿ ಏನೋ ಶಾಂತಿ, ಏನೋ ಸಂತೋಷ. ' ಕಣ್ ಕಾಣದುದಂ ಕರುಳ್ ಕಂಡಿತು. '

ಸನ್ಯಾಸಿ ಎದ್ದುನಿಂತು

" ಅಮ್ಮಾ...ನಾನು ನಿನ್ನ ಮಗ ಕರುಣಾಕರ " ಎಂದ.

ಪೆರುಂದೇವಿ ಮಗನನ್ನಪ್ಪಿಬಿಟ್ಟಳು. ದುಃಖ ಸಂತೋಷ ಸಮ್ಮಿಶ್ರ ವಾದ ಆಕೆಯ ಕಣ್ಣೀರು ಸನ್ಯಾಸಿಯ ಭುಜ ತೋಯಿಸಿತು.

ಸನ್ಯಾಸಿಯನ್ನು ಒಳಗೆ ಕರೆದೊಯ್ದು ಒಂದು ಚಾಪೆ ಹಾಸಿ ಕೂಡಿಸಿದಳು.

ಸುದ್ದಿ ಊರಿನಲ್ಲಿ ಕೂಡಲೆ ಹಬ್ಬಿತು. ಪೆರುಂದೇವಿ ಪಾಟಿಯ ಮಗನನ್ನು ನೋಡುವುದಕ್ಕೆ ಜನ ತಂಡೋಪತಂಡವಾಗಿ ಬಂದು ಸೇರಿದರು.

"ಇಪ್ಪತ್ತುನಾಲ್ಕು ವರ್ಷಗಳಾದುವು." ಎಂದಳು ಪೆರುಂದೇವಿ.

"ಹೌದು ತಾಯಿ. ಮನೆಬಿಟ್ಟು ಹೋದಾಗ ನನಗೆ ಎಂಟೇ ವರ್ಷ."

"ಎಲ್ಲಿಗೆ ಹೋಗಿದ್ದಿರಿ ಇಷ್ಟು ವರ್ಷ ಸ್ವಾಮಿಗಳೇ ?"

"ಅಮ್ಮಾ....ನಾನು ನಿನಗೆ ಸ್ವಾಮಿಯಲ್ಲ...ಮಗ. ಸನ್ಯಾಸಿಗೆ ಸಂಸಾರವಿಲ್ಲ. ಪೂರ್ವಜನ್ಮದ ವಾಸನೆಯನ್ನು ಅವನು ಅಳಿಸಿಬಿಡಬೇಕು. ಆದರೆ ವಾಸನಾಸಮುಚ್ಚಯದಲ್ಲಿ ತಾಯಿ ಬರುವುದಿಲ್ಲ. ಆಕೆ ಪ್ರತ್ಯಕ್ಷ ದೇವತೆ. ನೀವು ನನ್ನನ್ನು ಕರುಣಾಕರನೆಂದೇ ಕರೆಯಬೇಕು."

"ಹಾಗೇ ಆಗಲ್ಲಪ್ಪಾ....ನಿನಗೆ ಸಂತೋಷವಾಗುವ ಹಾಗಿದ್ದರೆ.... ಇಷ್ಟು ದಿನಗಳ ಮೇಲಾದರೂ ನಿನಗೆ ಮನೆಯ ನೆನಪು ಬಂದಿತಲ್ಲಾ. ನಾನು ಸಾಯುವ ಮುನ್ನಾದರೂ ನಿನ್ನ ಕಾಣುವ ಸುಕೃತ ಪಡೆದನಲ್ಲಾ !"

"ಸುಕೃತ ನನ್ನದು...ನನ್ನ ಸಾಧನ ಸಿದ್ಧಿಯಾಗಬೇಕಾದರೆ ತಾಯಿಯ ಆಶೀರ್ವಾದ ಬೇಕು."

ತಾಯಿ ತುಂಬಿದ ಮನಸ್ಸಿನಿಂದ ಸನ್ಯಾಸಿ ಮಗನನ್ನು ಹರಸಿದಳು.

"ಇನ್ನು ಎಲ್ಲಿಗೂ ಹೋಗಬೇಡ. ಮನೆಯಲ್ಲಿ ಸುಖವಾಗಿರು."

"ಅಮ್ಮಾ....ಸನ್ಯಾಸಿ ಮನೆಯಲ್ಲಿರಕೂಡದು. ಆದರೆ ನಾನು ಪೆರೂರಿನಲ್ಲೇ ನೆಲಸುತ್ತೇನೆ. ನನಗೆ ಗುರುವಿನ ಅನುಗ್ರಹವಾದುದು ಇಲ್ಲೇ. ನಾನು ಇಲ್ಲೇ ಇರಬೇಕೆಂದು ಗುರ್ವಾಜ್ಞೆಯಾಗಿದೆ."

ಮಗ ಮನೆಯಲ್ಲಿರದಿದ್ದರೂ ಅದೇ ಊರಿನಲ್ಲಿರುತ್ತಾನೆಂಬುದು ತಾಯಿಗೆ ಸಮಾಧಾನವನ್ನುಂಟುಮಾಡಿತು.

ಊರಿಗ ಸ್ವಲ್ಪ ದೂರದಲ್ಲಿದ್ದ ತೋಟದಲ್ಲಿ ಸಣ್ಣ ಮನೆಯೊಂದಿತ್ತು. ಮಾಲಿಕ ಪಳನಿಯಪ್ಪಮೊದಲಿಯಾರ್ ಅದನ್ನು ಸ್ವಾಮಿಗಳ ವಾಸಕ್ಕೆ ಬಿಟ್ಟುಕೊಟ್ಟ. ಪೆರೂರಿನ ಜನ ನಿತ್ಯ ಸ್ವಾಮಿಗಳ ಬಳಿಗೆ ಹೋಗಿ ಬರುವುದಕ್ಕಾರಂಭಿಸಿದರು. ಸುತ್ತಮುತ್ತಲಿನ ಹಳ್ಳಿಗಳ ಜನ ಅವರನ್ನನುಸರಿಸಿದರು. ಸ್ವಾಮಿಗಳ ಕೀರ್ತಿ ಕ್ರಮಕ್ರಮೇಣ ಕೊಯಿಮುತ್ತೂರು,

ಸೇಲಂ, ಈರೋಡಿನ ವರೆಗೆ ವ್ಯಾಪಿಸಿತು. ಭಕ್ತಾದಿಗಳು ಬೇಡ ಬೇಡ ವೆಂದರೂ ಸ್ವಾಮಿಗಳಿಗೆ ಕಾಣಿಕೆ ತಂದೊಪ್ಪಿಸುತ್ತಿದ್ದರು.

ಅಕ್ಕನನ್ನು ನೋಡಬಂದ ನಟೇಶ ಅಯ್ಯರ್ ಸೋದರಳಿಯನ ಖ್ಯಾತಿ ಕೇಳಿ ಅವನ ದರ್ಶನಮಾಡಿ ಬಂದರು. ಅಲ್ಲಿ ನೇರುತ್ತಿದ್ದ ಜನ ಜಂಗುಳಿ, ಅವರು ತಂದೊಪ್ಪಿಸುತ್ತಿದ್ದ ಕಾಣಿಕೆ ದ್ರವ್ಯ ಕಂಡು ನಟೇಶ ಅಯ್ಯರಿಗೆ ಒಂದು ಯೋಚನೆ ಹೊಳೆಯಿತು. ಇಲ್ಲಿಯೇ ಇದ್ದು ಅಳಿಯನ ಯೋಗಕ್ಷೇಮ ಏತಕ್ಕೆ ನೋಡಿಕೊಳ್ಳಬಾರದು ಎಂದು. ನಟೇಶ ಅಯ್ಯರ ಸಲಹೆಯನ್ನು ಪೆರುಂದೇವಿ ಕೇಳಿ ಸಂತೋಷಿಸಿ ಮಗನನ್ನೂ ಒಪ್ಪಿಸಿದಳು.

ನಟೇಶ ಅಯ್ಯರ್ ಸಂಸಾರ ಸಮೇತ ಬಂದು ಅಕ್ಕನ ಮನೆಯಲ್ಲಿ ಬೀಡು ಬಿಟ್ಟರು. ಸ್ವಾಮಿಗಳ ಬಳಿಗೆ ಹೋಗಿ ಬರುವವರ ಮೇಲ್ವಿಚಾರಣೆ ತೆಗೆದುಕೊಂಡು, ಅವರು ಕೊಡುತ್ತಿದ್ದ ಕಾಣಿಕೆಗಳನ್ನು ಅಯ್ಯರ್‌ರವರೇ ಸ್ವೀಕರಿಸುತ್ತಿದ್ದರು.

ನಟೇಶ ಅಯ್ಯರವರ ಧಣಿಯಾಗಿದ್ದ ಇನ್‌ಕಂಟ್ಯಾಕ್ಸ್ ಕಮಿಷನರ್ ಜಾನ್ ಡೇವೀಸ್ ವಿಶ್ರಾಂತಿವೇತನ ಪಡೆದಮೇಲೆ ಉದಕಮಂಡಲದಲ್ಲಿ ಮನೆಮಾಡಿಕೊಂಡು ವಾಸಮಾಡುತ್ತಿದ್ದ. ಡೇವೀಸ್‌ಗೆ ಮೊದಲಿನಿಂದಲೂ ಭಾರತೀಯ ತತ್ತ್ವಜ್ಞಾನದ ಮೇಲೆ ಆಸಕ್ತಿ, ಅಭಿಮಾನ. ನಟೇಶ ಅಯ್ಯರ್ ಆಗಾಗ್ಗೆ ಅವನಿಗೆ ಗೀತೆ, ಉಪನಿಷತ್ತುಗಳು, ರಾಮಾಯಣ ಓದಿ ಅರ್ಥ ಹೇಳುತ್ತಿದ್ದರು. ನಟೇಶ ಅಯ್ಯರ್ ಬಹಳ ವಿಚಾರಮಾಡಿ ಡೇವೀಸನಿಗೆ ಕಾಗದ ಬರೆದು ಅವನನ್ನು ಪೆರೂರಿಗೆ ಬರಮಾಡಿಕೊಂಡರು. ಕರುಣಾಕರ ಮಹರ್ಷಿಗಳ ದರ್ಶನ ಪಡೆದು, ಅವರೊಂದಿಗೆ ಕೆಲವು ಗಂಟೆ ಕಾಲ ವೇದಾಂತವನ್ನು ಚರ್ಚೆಮಾಡಿದ ಮೇಲೆ ಡೇವೀಸನಿಗೆ ಅವರ ಬಗ್ಗೆ ಅಪಾರ ಭಕ್ತಿಗೌರವಗಳು ಹುಟ್ಟಿದವು. ಹೋಗುವ ಮುನ್ನ ನಟೇಶ ಅಯ್ಯರವರನ್ನು ಕುರಿತು

"ಮಹರ್ಷಿಗಳನ್ನು ಕಂಡು ನನಗೆ ಅತ್ಯಾನಂದವಾಯಿತು. ಇದು ಒಂದು ಅಪರೂಪ ಜೀವ. ಹಲವು ಜನಕ್ಕೆ ಶಾಂತಿ, ಮುಕ್ತಿ ಕೊಡುವ ಮಹಾಶಕ್ತಿ ಮಹರ್ಷಿಯವರಲ್ಲಿದೆ."

ಎಂದು ಪ್ರಶಂಸೆಮಾಡಿದ. ಅಯ್ಯರವರು ಅದೇ ಸುಸಮಯ ವೆಂದು ಭಾವಿಸಿ

"ಇಲ್ಲಿಗೆ ಬಹಳ ಜನ ಮಹರ್ಷಿಗಳನ್ನು ನೋಡಲು ಬರುತ್ತಾರೆ. ಅವರಿಗೆ ತಕ್ಕ ವ್ಯವಸ್ಥೆಯಿಲ್ಲ. ಮಹರ್ಷಿಗಳಿಗೂ ಸರಿಯಾದ ವ್ಯವಸ್ಥೆ ಯಿಲ್ಲ."

"ಅವರಿರುವ ತೋಟ ಯಾರದು ?"

"ಇಲ್ಲಿಯ ಒಬ್ಬ ಮೊದಲಿಯಾರರದು."

"ಅವರು ತೋಟ ಮಾರಲು ಸಿದ್ಧರಾಗಿದ್ದಾರೆಯೇ ?"

"ಕೇಳಿ ನೋಡಬೇಕು."

"ಬನ್ನಿ ವಿಚಾರಮಾಡುವ."

ಎಂದು ಪಳನಿಯಪ್ಪ ಮೊದಲಿಯಾರರನ್ನು ಕಾಣಲು ಹೋದರು. ಮೊದಲಿಯಾರರು ವಿಚಾರ ಮಾಡಿ ಮಾಡಿ ಕೊನೆಗೆ ಸುಮಾರು ೯೦ ಎಕರೆಯಿದ್ದ ತಮ್ಮ ತೋಟವನ್ನು ಸಾಹೇಬರಿಗೆ ಹದಿಮೂರುಸಾವಿರಕ್ಕೆ ಮಾರಲೊಪ್ಪಿಕೊಂಡರು.

ಡೇವೀಸ್ ತೋಟವನ್ನು ಕೊಂಡು ಅದನ್ನು ಮಹರ್ಷಿಗಳಿಗೆ ಕಾಣಿಕೆಯಾಗಿ ಅರ್ಪಿಸಿಬಿಟ್ಟರು.

ಡೇವೀಸರ ಸೇವೆ ಅಲ್ಲಿಗೇ ನಿಲ್ಲಲಿಲ್ಲ. ಉದಕಮಂಡಲದಲ್ಲಿದ್ದ ತಮ್ಮ ಐರೋಪ್ಯ ಗೆಳೆಯರು ಸಾವಿರಾರು ರೂಪಾಯಿ ದಾನಕೊಡು ವಂತೆ ಪ್ರೇರೇಪಿಸಿದರು. ಮಹರ್ಷಿಗಳ ಮೇಲೆ ಭಾರತದಲ್ಲಿದ್ದ ಇಂಗ್ಲಿಷ್ ಪತ್ರಿಕೆಗಳು, ಲಂಡನ್, ಅಮೇರಿಕಾಗಳ ಪತ್ರಿಕೆಗಳಿಗೆ ಲೇಖನಗಳನ್ನು ಬರೆದರು.

ನಾಲ್ಕಾರು ತಿಂಗಳಲ್ಲಿ "ಕರುಣಾಶ್ರಮ" ಯೋಜನೆ ರೂಪು ಗೊಂಡಿತು. ನಟೇಶ ಅಯ್ಯರವರು ಆಶ್ರಮದ ಸರ್ವಾಧಿಕಾರಿಗಳಾಗಿ ನಿಂತು ಎಲ್ಲ ಕೆಲಸಕಾರ್ಯಗಳನ್ನೂ ನಿರ್ವಹಿಸಲಾರಂಭಿಸಿದರು. ಹಣ ಬಂದು ಸುರಿಯಲಾರಂಭವಾಯಿತು.

ತೋಟದ ಕೆಲಭಾಗವನ್ನು ಸೊಗಸಾದ ಕಟ್ಟಡಗಳು ಆಕ್ರಮಿಸಿ ಕೊಂಡವು. ಆಶ್ರಮವನ್ನು ಪ್ರವೇಶಿಸಿದ ಕೂಡಲೆ ಎದುರಿಗೆ

ಸುಬ್ರಹ್ಮಣ್ಯಸ್ವಾಮಿಯ ದೇವಾಲಯ. ದೇವಾಲಯದ ಬಲಭಾಗಕ್ಕೆ ವಿಶಾಲ ಸಭಾಮಂದಿರ. ಸಭಾಮಂದಿರದ ಒಂದು ಪಕ್ಕದಲ್ಲಿಯೇ ಪುಸ್ತಕ ಭಂಡಾರ. ಸಭಾಮಂದಿರದ ಹಿಂಬದಿಗೆ ಮಹರ್ಷಿಗಳ ಬಿಡಾರ.

ದೇವಾಲಯದ ಎಡಭಾಗಕ್ಕೆ ಭೋಜನ ಶಾಲೆ, ಕರುಹಟ್ಟಿ, ಉಗ್ರಾಣ, ಅತಿಥಿ ಮಂದಿರ. ವಿಲಾಯಿತಿ ಅತಿಥಿಗಳಿಗೆ ಪ್ರತ್ಯೇಕ ಅತಿಥಿ ಮಂದಿರ. ದೇಶೀ ಅತಿಥಿಗಳ ಅತಿಥಿಮಂದಿರಕ್ಕೆ ನೆಲಕ್ಕೆ ಸಗಣಿ ಸಾರಿಸಿ, ಕೆಲವು ಈಚಲು ಚಾಪೆಗಳು ಹಾಸಲ್ಪಟ್ಟಿದ್ದವು. ವಿಲಾಯಿತಿ ಅತಿಥಿ ಮಂದಿರದಲ್ಲಿ ಕೆಲವು ಸೊಗಸಾಗಿ ಫರ್ನಿಷ್ ಆದ ಕೊಠಡಿಗಳು; ಪ್ರತಿಯೊಂದು ಕೊಠಡಿಗೂ ಒಂದು 'ಬಾತ್ ರೂಮ್.' ವಿಲಾಯಿತಿ ಅತಿಥಿಗಳಿಗೆ ಊಟವನ್ನು ಅವರವರ ಕೋಣೆಗೇ ಕಳಿಸಿಕೊಡಲಾಗುತ್ತಿತ್ತು. ದೇಶೀಯ ಅತಿಥಿಗಳು ಮಾತ್ರ ಸಾರ್ವಜನಿಕ ಭೋಜನ ಗೃಹಕ್ಕೇ ಬರಬೇಕಾಗಿತ್ತು. ಮೊದಮೊದಲು ನಟೇಶ ಅಯ್ಯರ್ ಎರಡು ಭೋಜನಗೃಹಗಳನ್ನೇರ್ಪಡಿಸಿ ಬ್ರಾಹ್ಮಣರಿಗೆ, ಬ್ರಾಹ್ಮಣೇತರರಿಗೆ ಎಂದು ವಿಭಾಗಮಾಡಿದರು. ಮಹರ್ಷಿಗಳಿಗೆ ಭೋಜನವನ್ನು ಅವರ ಕೋಣೆಗೇ ಕಳಿಸಲಾಗುತ್ತಿತ್ತು. ಮಹರ್ಷಿಗಳು ಈ ಪದ್ಧತಿಯನ್ನು ರದ್ದುಮಾಡಿ ಒಂದೇ ಭೋಜನಗೃಹವೇರ್ಪಡಿಸಿ ತಾವು ಎರಡು ಹೊತ್ತೂ ಅಲ್ಲೇ ಊಟಕ್ಕೆ ಬರುತ್ತಿದ್ದರು. ಎಲ್ಲ ಧರ್ಮದವರಿಗೂ 'ಏಕಪಂಙ್ತಿ' ಭೋಜನವಾಗುವಂತೆ ವ್ಯವಸ್ಥೆ ಮಾಡಿಸಿದರು. ಮಹರ್ಷಿಗಳ ಪಂಙ್ತಿ ಲಾಭಕ್ಕಾಗಿ ವಿಲಾಯಿತಿ ಅತಿಥಿಗಳೂ ಸಾರ್ವಜನಿಕ ಭೋಜನಾಲಯಕ್ಕೇ ಬರಲಾರಂಭಿಸಿದರು. ಆದರೆ ಪಾರ್ಸಿ ಅತಿಥಿಗಳು ಮಾತ್ರ ಭೋಜನವನ್ನು ತಮ್ಮ ಕೋಣೆಗಳಿಗೇ ತರಿಸಿಕೊಳ್ಳುತ್ತಿದ್ದರು.

ಆಶ್ರಮಕ್ಕೆ ಯಾರು ಯಾವ ಹೊತ್ತಿನಲ್ಲಿ ಹಸಿದು ಬಂದರೂ ಅನ್ನನೀಡಬೇಕೆಂದು ಮಹರ್ಷಿಗಳ ಆಸೆ. ನಟೇಶ ಅಯ್ಯರ್, ಸಮಸ್ತ ಕೆಲಸವೂ ಅದರಿಂದ ಕೆಡುವುದೆಂದು ಬಿನ್ನವಿಸಿಕೊಂಡು ಊಟದ ವೇಳೆಗೆ ಬಂದವರಿಗೆ ಅನ್ನಹಾಕುವ ವ್ಯವಸ್ಥೆಮಾಡಿದರು.

ಆಶ್ರಮಕ್ಕೆ ಹಣ ಸಂಗ್ರಹವಾಗುತ್ತಿದ್ದಂತೆ ಜನಸಂಗ್ರಹವೂ ಆಗುತ್ತಿತ್ತು. ಕೆಲವು ವಿಧವೆಯರು ಆಶ್ರಮದ ಕೈಂಕರ್ಯ ಮಾಡಿಕೊಂಡು

ಅಡಿಗೆಯ ಸೇವೆಗೆ ನಿಂತರು. ಕೆಲವು ನಿರಾಶ್ರಿತರು ಅತಿಥಿಗಳ ಸೇವೆ, ಗೋಶಾಲೆಯ ಕೆಲಸ, ಆಳುಗೆಲಸ, ತೋಟದ ಕೆಲಸಗಳನ್ನೊಪ್ಪಿಕೊಂಡರು. ಆಶ್ರಮ ಒಂದು ದೊಡ್ಡ ಸಂಸಾರದಂತೆ ಸಾಗಿತು.

ಮಹರ್ಷಿಗಳು ಬೆಳಿಗ್ಗೆ ನಾಲ್ಕುಗಂಟೆಗೆದ್ದು ಸ್ನಾನಮಾಡಿ ಗುಡ್ಡದ ಮೇಲೆ ಹೋಗುತ್ತಿದ್ದರು. ಸುಮಾರು ಏಳು ಗಂಟೆಗೆ ಹಿಂತಿರುಗಿ ಪುನಃ ಸ್ನಾನಮಾಡಿ ಸಭಾಭವನದಲ್ಲಿ ಕೂಡುತ್ತಿದ್ದರು. ಭಕ್ತಾದಿಗಳ ಸೇವೆಯನ್ನು ಸ್ವೀಕರಿಸಿ, ಅವರಿಗೆ ಉಪದೇಶಕೊಟ್ಟು, ಅವರ ಕಷ್ಟ ಸುಖ ವಿಚಾರಿಸುತ್ತಿದ್ದರು. ಹತ್ತುಗಂಟೆಯ ಸುಮಾರಿಗೆ ಮಹರ್ಷಿಗಳು ಏಕಾಂತ ವಾಸಕ್ಕೆ ತೆರಳಿ ಹನ್ನೆರಡರವರೆಗೆ ಗ್ರಂಥ ವ್ಯಾಸಂಗ ಮಾಡುತ್ತಿದ್ದರು. ಹನ್ನೆರಡಕ್ಕೆ ಸರಿಯಾಗೆದ್ದು ಮತ್ತೆ ಸ್ನಾನಮಾಡಿ, ಸ್ವಾಮಿಯ ದರ್ಶನ ತೆಗೆದುಕೊಂಡು ಅತಿಥಿಗಳು ಭಕ್ತರೊಂದಿಗೆ ಪ್ರಸಾದ ಸ್ವೀಕರಿಸುತ್ತಿದ್ದರು. ನಾಲ್ಕು ಗಂಟೆಯುವರೆಗೆ ಮಹರ್ಷಿಗಳು ಗ್ರಂಥರಚನೆ, ಗ್ರಂಥವ್ಯಾಸಂಗದಲ್ಲಿ ನಿರತರಾಗಿದ್ದು, ಒಂದು ಗಂಟೆಕಾಲ ಭಕ್ತರನ್ನು ಸಂತೈಸಿ ಸಂಜೆ ಪುನಃ ಗುಡ್ಡದ ಕಡೆ ಹೋಗಿ ಬರುತ್ತಿದ್ದರು. ರಾತ್ರಿ ಎಂಟುಗಂಟೆಯವರೆಗೆ ಭಕ್ತರ ಸೇವೆ, ಕೈಂಕರ್ಯ ಸ್ವೀಕರಿಸಿ ಮತ್ತೆ ಸ್ನಾನಮಾಡಿ, ಸ್ವಾಮಿ ದರ್ಶನ ಪಡೆದು, ಎಲ್ಲರೊಂದಿಗೆ ಪ್ರಸಾದ ಸ್ವೀಕರಿಸಿ ಏಕಾಂತಕ್ಕೆ ತೆರಳುತ್ತಿದ್ದರು. ರಾತ್ರಿ ಹನ್ನೆರಡರವರೆಗೆ ವ್ಯಾಸಾಂಗಮಾಡುತ್ತಿದ್ದು ವಿಶ್ರಾಂತಿಗೆ ತೆರಳುತ್ತಿದ್ದರು.

ವಿದ್ವಾಂಸರು, ವಕ್ತೃಗಳು, ಸಂಗೀತ ಕಲಾಕೋವಿದರು ಪರೂರಿಗೆ ಯಾತ್ರೆ ಬಂದು ಮಹರ್ಷಿಗಳಿಗೆ ಸೇವೆ ಅರ್ಪಿಸಿ ಹೋಗುತ್ತಿದ್ದರು. ಅವರಿಗೆ ಯೋಗ್ಯ ಬಹುಮಾನವನ್ನೂ ಮಹರ್ಷಿಗಳು ಆಶೀರ್ವದಿಸುತ್ತಿದ್ದರು.

ಮಹರ್ಷಿಗಳ ದರ್ಶನಕ್ಕೆ ಸಭಾಮಂದಿರದೊಳಗೆ ಪ್ರವೇಶಿಸುತ್ತಿದ್ದವರು ಪಾದುಕೆಗಳನ್ನು ಹೊರಗೇ ಕಳಚಿ, ಶುಭ್ರವಾಗಿ ಕಾಲು ತೊಳೆದುಕೊಂಡು ಒಳಗೆ ಹೋಗಬೇಕಾಗಿತ್ತು. ಒಳಗೆ ಪ್ರವೇಶಿಸಿದ ಕೂಡಲೆ ಮಹರ್ಷಿಗಳಿಗೆ ಉದ್ದಂಡ ಪ್ರಣಾಮಮಾಡಿ ಒಂದೆಡೆ ನಿಶ್ಶಬ್ದವಾಗಿ ಕುಳಿತುಕೊಳ್ಳಬೇಕಾಗಿತ್ತು. ಮಹರ್ಷಿಗಳನ್ನು ಮಾತನಾಡಿಸುವಂತಿರಲಿಲ್ಲ. ಈ ನಿಯಮಗಳು ಸಾಧಾರಣವಾಗಿ ಪಾರ್ಸಿಗಳಿಗ , ವಿಲಾಯಿತಿ ಅತಿಥಿಗ

ಳಿಗೂ ಅನ್ವಯಿಸುತ್ತಿರಲಿಲ್ಲ. ನಿಯಮಗಳನ್ನು ಸರಿಯಾಗಿ ಪಾಲಿಸದಿದ್ದ ದೇಶೀಯರನ್ನು ನಟೇಶ ಅಯ್ಯರ್ ನಿರ್ದಾಕ್ಷಿಣ್ಯವಾಗಿ ದಂಡಿಸುತ್ತಿದ್ದರು.

ಆಶ್ರಮಕ್ಕೆ ಹೋಗಲಿಚ್ಛಿಸುವ ಅತಿಥಿಗಳು ಮೊದಲೇ ಸರ್ವಾಧಿಕಾರಿಗೆ ಬರೆದುಕೊಂಡು ಅವರ ಅಪ್ಪಣೆ ಪಡೆದು ಹೋಗಬೇಕಾಗಿತ್ತು. ಒಂದೆರಡು ದಿನ ಅವರು ಅತಿಥಿಗೃಹದಲ್ಲಿರಲು ಅಡ್ಡಿಯಿರಲಿಲ್ಲ. ಹೋಗುವ ಮುನ್ನ ಅವರಿಗೆ ಸರ್ವಾಧಿಕಾರಿಗಳು ಒಂದು ಹುಂಡಿ ತೋರಿಸುತ್ತಿದ್ದರು. ಅತಿಥಿಗಳು ಶಕ್ತ್ಯನುಸಾರ ಹುಂಡಿಯೊಳಗೆ ಕಾಣಿಕೆಯರ್ಪಿಸಬೇಕಾಗಿತ್ತು. ಕಾಣಿಕೆ ಅರ್ಪಿಸದಿದ್ದ ಅತಿಥಿಗಳನ್ನೂ, ಕಡಿಮೆ ಅರ್ಪಿಸಿದವರನ್ನೂ ಸರ್ವಾಧಿಕಾರಿಗಳು ಕೆಂಗಣ್ಣಿನಿಂದ ನೋಡುವ ಪದ್ಧತಿಯೂ ಆಚರಣೆಯಲ್ಲಿತ್ತು.

ಮಹರ್ಷಿಗಳು ವ್ಯವಹಾರಭಾಗವನ್ನು ಪೂರ್ಣವಾಗಿ ಸರ್ವಾಧಿಕಾರಿಗಳಿಗೆ ವಹಿಸಿಬಿಟ್ಟಿದ್ದರು. ಅವರು ಸಸುನಗುತ್ತಾ ಸಭಾಭವನದಲ್ಲೇ ಪಡಿಸಿದ್ದ ಭದ್ರಾಸನದ ಮೇಲೆ ಬಂದು ಕುಳಿತುಕೊಳ್ಳುತ್ತಿದ್ದರು. ಎದುರಿಗೆ ನೆರೆಯುತ್ತಿದ್ದ ಭಕ್ತವೃಂದವನ್ನು ನೋಡಿ ಮಂದಹಾಸ ಬೀರುತ್ತಿದ್ದರು. ಅವರ ಮಂದಹಾಸದಿಂದಲೇ ತಮ್ಮೆಲ್ಲ ಕಷ್ಟಗಳು ಬಿಡುಗಡೆಯಾಗಿ, ಸಮಸ್ಯೆಗಳು ಪರಿಹಾರವಾಗುತ್ತಿದ್ದವೆಂದು ಭಕ್ತವೃಂದ ಹೇಳುತ್ತಿತ್ತು. ಆಗಾಗ್ಗೆ ಒಂದೆರಡು ಅಳಿಲು ಬಂದು, ಮಹರ್ಷಿಗಳ ಬಳಿ ನಿರ್ಭೀತಿಯಿಂದ ಆಡಿ ಅವರು ತಿನ್ನಿಸುತ್ತಿದ್ದ ಗೇರುಬೀಜ ಸವಿದು ಹೋಗುತ್ತಿದ್ದವು. ಒಮ್ಮೊಮ್ಮೆ ಮಹರ್ಷಿಗಳು ಗೋಶಾಲೆಗೆ ಹೋಗಿ ಅಲ್ಲಿದ್ದ ಹಸು ಕರುಗಳನ್ನು ಪ್ರೀತಿಯಿಂದ ನೇವರಿಸುತ್ತಿದ್ದರು. ನಿರಾಡಂಬರ, ಅನಾಸಕ್ತಿ, ಸದಾ ಮಂದಹಾಸ ಮಹರ್ಷಿಗಳ ಹೆಗ್ಗುರುತುಗಳಾಗಿದ್ದುವು.

ದಿನ ಕಳೆದಂತೆ ಆಶ್ರಮ ಬೃಹತ್ ಸಂಸ್ಥೆಯಾಗುತ್ತ ಬಂತು. ಅಮೇರಿಕಾ, ಫ್ರಾನ್ಸ್, ಸ್ವೀಡನ್, ಆಸ್ಟ್ರೇಲಿಯಾ ದೇಶಗಳಿಂದ ಭಕ್ತಾದಿಗಳು ಬರತೊಡಗಿದರು. ಅನೇಕ ಊರುಗಳಲ್ಲಿ ಮಹರ್ಷಿಗಳ ಭಕ್ತವರ್ಗದವರು ಉಪಸಂಸ್ಥೆಗಳನ್ನು ನಡೆಸತೊಡಗಿದರು. ಮಹರ್ಷಿಗಳ ಆಶ್ರಮಕ್ಕೆ ಹೋಗಿಬರುವುದು ನಾಗರಿಕತೆಯ ಕುರುಹಾಗುತ್ತ ಬಂತು.

ದೀನರು, ದುಃಖಿಗಳು, ವ್ಯಾಧಿಗ್ರಸ್ತರು, ಜ್ಞಾನಭಿಕ್ಷುಗಳೂ ತಂಡೋಪ ತಂಡವಾಗಿ ಆಶ್ರಮಕ್ಕೆ ಬರಲಾರಂಭಿಸಿದರು.

ಹೀಗೆ ಆಶ್ರಮಕ್ಕೆ ಹೋಗಬೇಕೆಂದು ಬಂದವರಲ್ಲಿ ಸಂಗಪ್ಪನೂ ಒಬ್ಬ. ಸಂಗಪ್ಪ ವಿಜಾಪುರದ ಎಕ್ಸೈಜ್ ಖಾತೆಯಲ್ಲಿ ಇನ್‌ಸ್ಪೆಕ್ಟ ರಾಗಿದ್ದ. ಅವನನ್ನು ಒಂದು ಧರ್ಮ ಸಮಸ್ಯೆ ಕಾಡುತ್ತಿತ್ತು. ಅದರ ಪರಿಹಾರ 'ಕರುಣಾಶ್ರಮ' ದಲ್ಲಿ ಆಗುವುದೆಂದು ಉಭಯಮಿತ್ರ ಶಂಕರಪ್ಪ ಕರೆದುಕೊಂಡು ಬಂದಿದ್ದ.

ಸಂಗಪ್ಪ ಸಣ್ಣ ಅಧಿಕಾರಿಯಾದರೂ ತುಂಬ ಪ್ರಭಾವಶಾಲಿ. ಲಂಚಬಡಕರ ಖಾತೆಯೆಂದು ಹೆಸರಾಗಿದ್ದ ಎಕ್ಸೈಜ್ ಡಿಪಾರ್ಟ ಮೆಂಟಿನಲ್ಲಿ ನಿರ್ಮಲನಾಗಿ ಧೀರನಾಗಿದ್ದವನು ಅವನೊಬ್ಬನೇ. ಅವನ ಪ್ರಾಮಾಣಿಕತೆಗೆ ಎಲ್ಲರೂ ಭಯಪಡುತ್ತಿದ್ದರು. ಅವನ ಮೇಲಣ ಅಧಿಕಾರಿಗಳು ಕೂಡ ಅವನಲ್ಲಿ ಗೌರವದಿಂದ ವರ್ತಿಸುತ್ತಿದ್ದರು. ಇದಕ್ಕೆ ಕಾರಣವಿತ್ತು. ಒಮ್ಮೆ ಸಂಗಪ್ಪನಿಗೆ ಸುದ್ದಿ ಬಂತು. ವಿಜಾಪುರದಲ್ಲಿ ದರ್ಜಿ ಕೆಲಸಮಾಡುವ ಸೋಗು ಹಾಕುತ್ತಿದ್ದ ಒಬ್ಬ ರಾತ್ರಿಯ ವೇಳೆ ಕಳ್ಳ ಸಾರಾಯಿ ಭಟ್ಟಿಯಿಳಿಸುತ್ತಾನೆಂದು. ಸಂಗಪ್ಪ ಕೂಡಲೆ ಸಿಬ್ಬಂದಿ ಕರೆದುಕೊಂಡು ದರ್ಜಿಯ ಪತ್ತೆ ಹಚ್ಚಿ ಅವನನ್ನು ಬಂಧಿಸಿದ. ದರ್ಜಿಯ ಮೇಲೆ ಕೋರ್ಟಿನಲ್ಲಿ ಕೇಸೂ ಆಯಿತು. ದರ್ಜಿಗೆ ಮನೆ ಬಾಡಿಗೆ ಕೊಟ್ಟಿದ್ದ ಒಬ್ಬ ಮುದುಕಪ್ಪ ಬಂದು

'ರಾವ್ ಸಾಹೇಬ್. ಅವ ಅಂಥಾವನಲ್ರೀ. ಗೃಹಸ್ಥ. ಬಡವ. ಸಾರಾಯಿ ಕುಡಿತಾನೆ ನಿಜ. ಆದರೆ ಭಟ್ಟಿಯಿಳಿಸಲ್ಲ. ಅವನಿಗೆ ಆಗ ದೋರು ಯಾರೋ ನಿಮಗೆ ಸುಳ್ಳು ಸಮಾಚಾರ ಹೇಳಿದ್ದಾರೆ.'

ಎಂದು ತಿಳಿಸಿದ. ಸಂಗಪ್ಪನ ಮನಸ್ಸಿನಲ್ಲಿ ವಿಪ್ಲವವಾಗಿ ಹೋಯಿತು. ಕೂಡಲೆ ತನಿಖೆ ಕ್ರಮ ಕೈಗೊಂಡು ಕೂಲಂಕಷವಾಗಿ ವಿಚಾರಮಾಡಲಾಗಿ ದರ್ಜಿ ನಿರಪರಾಧಿಯೆಂದು ಖಚಿತವಾಯಿತು.

ಮಾರನೆಯ ದಿನ ಕೋರ್ಟಿನಲ್ಲಿ ಕೇಸು. ಸಂಗಪ್ಪ ನ್ಯಾಯಾ ಧೀಶರ ಮುಂದೆ ಕೈಮುಗಿದು ನಿಂತು

'ನಾನು ಮಹಾಪರಾಧ ಮಾಡಿದ್ದೇನೆ. ಈತ ನಿರಪರಾಧಿ.

ಸರಿಯಾಗಿ ವಿಚಾರ ಮಾಡದೆ ಈತನನ್ನು ತಮ್ಮ ಮುಂದೆ ನಿಲ್ಲಿಸಿದ್ದೇನೆ. ಈತನ ಮೇಲಣ ಆಪಾದನೆಗಳನ್ನು ನಾನು ಹಿಂದಕ್ಕೆ ತೆಗೆದುಕೊಳ್ಳುತ್ತೇನೆ. ಮತ್ತು ನನ್ನ ಅವಿವೇಕವನ್ನೊಪ್ಪಿಕೊಂಡು ನನಗೆ ಶಿಕ್ಷೆ ವಿಧಿಸಬೇಕೆಂದು ಬೇಡಿಕೊಳ್ಳುತ್ತೇನೆ. '

ಎಂದ. ನ್ಯಾಯಾಧೀಶರು ಅವಾಕ್ಕಾದರು. ಸಂಗಪ್ಪನ ಸದ್ಗುಣಕ್ಕೆ ಸೋತು ಅವರು ದರ್ಜಿಯನ್ನು ಬಿಡುಗಡೆ ಮಾಡಿ ಸಂಗಪ್ಪನ ಪರವಾಗಿ ದೊಡ್ಡ ಪ್ರಶಸ್ತಿ ಬರೆದು ಅವನ ಮೇಲಣ ಅಧಿಕಾರಿಗಳಿಗೆ ಕಳಿಸಿದರು. ಸಂಗಪ್ಪನಿಗೆ ತೃಪ್ತಿಯಾಗಲಿಲ್ಲ. ದರ್ಜಿಗೆ ತನ್ನ ಒಂದು ತಿಂಗಳ ಸಂಬಳ ಕೊಟ್ಟು ಕ್ಷಮೆ ಬೇಡಿದ. ಸಂಗಪ್ಪನಿಗೆ ಎಕ್ಸೈಜ್ ಖಾತೆಗಿಂತಲೂ ವೇದಾಂತ ಹೆಚ್ಚು ಪ್ರಿಯವಾಗಿತ್ತು. ಆ ಅಭಿರುಚಿಯೇ ಅವನಿಗೂ ಗವೀಮಠದ ಶಂಕರಪ್ಪನಿಗೂ ನಿಕಟ ಸ್ನೇಹವನ್ನು ಕೂಡಿಸಿತ್ತು. ಶಂಕರಪ್ಪ ವೃತ್ತಿಯಲ್ಲಿ ಶಾಲಾಮಾಸ್ತರು, ಪ್ರವೃತ್ತಿಯಲ್ಲಿ ವೇದಾಂತಿ. 'ಲೌಕಿಕ ಪರಮಾರ್ಥವೆರಡನು ಮಾಣದೆ ಕೂಡಿ ನುಡಿಸುತಿಹ ಜಾಣ' ನಾದ ನಿಜಗುಣ ಶಿವಯೋಗಿಯ ಆರಾಧಕ. ನಿಜಗುಣನ ವೇದಾಂತ ಗ್ರಂಥಗಳ ವ್ಯಾಖ್ಯೆಯನ್ನು ಶಂಕರಪ್ಪನ ಬಾಯಲ್ಲಿ ಕೇಳುವುದಕ್ಕೆ ಸಂಗಪ್ಪನಿಗೆ ಪರಮ ಪ್ರೀತಿ. ಶಂಕರಪ್ಪ ಸಂಗಪ್ಪನ ಗೆಳೆಯನಾಗಿದ್ದುದು ಮಾತ್ರವಲ್ಲದೆ ಅವನ ಹಿತೈಷಿ, ಮಾರ್ಗದರ್ಶಕ, ದಾರ್ಶನಿಕನೂ ಆಗಿದ್ದ. ಶಂಕರಪ್ಪನ ಸಲಹೆ ಕೇಳದೆ ಸಂಗಪ್ಪ ಯಾವ ಕೆಲಸಕ್ಕೂ ಕೈ ಹಾಕುತ್ತಿರಲಿಲ್ಲ.

ಸಂಗಪ್ಪನ ಸಹವಾಸದಿಂದ ಶಂಕರಪ್ಪನಿಗೆ ಕರುಣಾಕರ ಮಹರ್ಷಿಗಳ ಗ್ರಂಥ ಪರಿಚಯವಾಗಿತ್ತು. ಅವರ ಗ್ರಂಥಗಳನ್ನೂ ಅವರ ಮೇಲಣ ಗ್ರಂಥಗಳನ್ನೂ ಓದಿಯೋದಿ ಸಂಗಪ್ಪ ಮಹರ್ಷಿಗಳ ಬಗ್ಗೆ ಅನ್ಯಾದೃಶ ಭಕ್ತಿ ಗೌರವ ತಳೆದಿದ್ದ. ಮಹರ್ಷಿಗಳ ಮತ್ತು ನಿಜಗುಣನ ಗ್ರಂಥಗಳನ್ನು ತುಲನಾತ್ಮಕ ದೃಷ್ಟಿಯಲ್ಲಿ ಗೆಳೆಯರಿಬ್ಬರೂ ಅಭ್ಯಾಸಮಾಡಿ ಹಲವು ಇರುಳುಗಳನ್ನು ಅಧ್ಯಾತ್ಮ ವಿಲಾಸದ ಆನಂತಾನಂದದಲ್ಲಿ ಕಳೆದಿದ್ದರು.

ಒಮ್ಮೆಯಾದರೂ ಪೆರೂರಿಗೆ ಹೋಗಿ ಮಹರ್ಷಿಗಳ ದರ್ಶನಲಾಭ ಪಡೆಯಬೇಕೆಂದು ಇಬ್ಬರ ಮನಸ್ಸಿನಲ್ಲಿಯೂ ಉತ್ಕಟಾಸೆ. ಆದರೆ ಸಂಗಪ್ಪನಿಗೆ ಸೂಟಿಯಿದ್ದಾಗ ಶಂಕರಪ್ಪನಿಗೆ ಕೈತುಂಬ ಕೆಲಸ; ಶಂಕರಪ್ಪನಿಗೆ ಪುರುಸತ್ತಾದಾಗ ಸಂಗಪ್ಪನಿಗೆ ಕಳ್ಳಭಟ್ಟಿಯ ಸಂಶೋಧನೆಯ ಕೆಲಸ. ಇಬ್ಬರಿಗೂ ಅನುಕೂಲವಾದ ಸಮಯುವೇ ಒದಗಿರಲಿಲ್ಲ.

ಒಂದು ದಿನ ಇದ್ದಕ್ಕಿದ್ದಂತೆ ಸಂಗಪ್ಪನಿಂದ ನನಗೊಂದು ತಾರು ಬಂತು ಧಾರವಾಡದಿಂದ.

"ರಾತ್ರಿ ಇಲ್ಲಿಂದ ಹೊರಡುತ್ತೇವೆ. ನಾನೂ, ಶಂಕರಪ್ಪ.

ನೀವು ಕೂಡಲೆ ಕರುಣಾಶ್ರಮಕ್ಕೆ ಹೊರಡಬೇಕು."

ಇಂತಹ ತರಾತುರಿಯೇನು ಎಂದು ನನಗೆ ನಾನೇ ಪ್ರಶ್ನೆಹಾಕಿಕೊಂಡೆ. ಮಾರನೆಯ ರಾತ್ರಿ ಸಂಗಪ್ಪ, ಶಂಕರಪ್ಪ ಇಬ್ಬರೂ ಬಂದಿಳಿದರು.

"ನಾಳೆ ಬೆಳಿಗ್ಗೆ ಹೊರಡುವುದು ತಾನೇ."

"ಅಷ್ಟೇನು ಅವಸರ. ಇದೇ ಬಂದಿರುವಿರಿ. ಒಂದು ದಿನವೆಲ್ಲಾ ಪ್ರಯಾಣ ಮಾಡಿರುವಿರಿ. ಸ್ವಲ್ಪ ವಿಶ್ರಾಂತಿ ತೆಗೆದುಕೊಳ್ಳಿ. ಒಂದೆರಡು ದಿನ ಬಿಟ್ಟು ಹೋದರಾಯಿತು."

"ಇಲ್ಲ ರಾಯರೇ, ಆಶ್ರಮಕ್ಕೆ ಹೋಗಿ ಬಂದು ಬಿಡುವ. ಅನಂತರ ಒಂದೆರಡು ದಿನ ನಾವು ಇಲ್ಲಿದ್ದು ಊರಿಗೆ ಪ್ರಯಾಣ ಬೆಳಸುತ್ತೇವೆ" ಎಂದು ಶಂಕರಪ್ಪ ಒತ್ತಾಯ ಪಡಿಸಿದ.

"ಏನು ವಿಷಯ ಮಾಸ್ತರ್—ಇಷ್ಟೇಕೆ ಅವಸರ?"

"ಸಂಗಪ್ಪನ ವಿಷಯ ನಿಮಗೆ ಗೊತ್ತಿದ್ದದ್ದೇ."

"ಯಾವ ವಿಷಯ."

"ಅವನ ಮದುವೆಯ ವಿಷಯ."

"ಮದುವೆ ಆಗಿದೆಯಲ್ಲಾ."

"ಆಗಿದೆ. ಆಕೆ ಸಂಗಪ್ಪನ ಮನೆಗೆ ಬಂದಂದಿನಿಂದಲೂ ಹಾಸಿಗೆ ಹಿಡಿದು ಮಲಗಿದ್ದಾಳೆ. ಕ್ಷಯವೆಂದು ಡಾಕ್ಟರು ಸಾರಿದ್ದಾರೆ. ಉಳಿಯುವ ಸಂಭವವಿಲ್ಲ."

"ಹಾಗಾದರೆ ಮತ್ತೊಂದು ಮದುವೆಯೇ?"

"ಸಂಗಪ್ಪ ಕೂಳು ಕಾಣುವುದೂ ಕಷ್ಟವಾಗಿದೆ. ಪ್ರಾಣಿ ಬೇಕಾದಷ್ಟು ದುಡಿಯುತ್ತಿ—ಮನಸ್ಸಿಗೆ ಸ್ವಲ್ಪವೂ ಸಮಾಧಾನವಿಲ್ಲ."

"ಇದಕ್ಕೆ ಸಂಗಪ್ಪ ಏನು ಹೇಳುತ್ತಾರೆ."

"ನನಗೆ ಮದುವೆ ಖಂಡಿತ ಬೇಡ ಎಂದು ಹಟ ಹಿಡಿದಿದ್ದಾನೆ. ಅವನ ಮನೆಯವರೆಲ್ಲಾ ಗೋಗರೆದರು. ಕಾಯಿಲೆ ಹೆಂಡತಿಯೇ ಬೇಕಾದಷ್ಟು ಹೇಳಿದಳು. ಯಾರ ಮಾತನ್ನೂ ಸಂಗಪ್ಪ ಕಿವಿಯ ಮೇಲೆ ಹಾಕಿಕೊಳ್ಳುವುದಿಲ್ಲ."

"ಅವರ ದೃಷ್ಟಿ ಸರಿಯೆಂದು ತೋರುತ್ತದೆ ಮಾಸ್ತರ್."

"ಸರಿಯೆಂದು ಹೇಗೆ ಹೇಳುವಿರಿ. ಅವನಿಗೆ ಚಿಕ್ಕವಯಸ್ಸು. ಹೀಗೇ ಅವನು ಎಷ್ಟು ದಿನ ಕಳೆಯಬೇಕು."

"ನೀವು ಲಗ್ನಮಾಡಿಸಿದ ಕೂಡಲೆ ಈಗ ಕಾಯಿಲೆ ಇರುವ ಹೆಂಡತಿ ತೀರಿಕೊಂಡರೆ?"

"ಆಕೆ ಬದುಕುವ ಸಂಭವವೇ ಇಲ್ಲವಲ್ಲ."

"ಡಾಕ್ಟರುಗಳ ಮಾತು ಯಾರ ನೆಚ್ಚಿಕೆ ಮಾಸ್ತರ್. ಗಂಡ ತನ್ನಲ್ಲಿಯೇ ಅನುರಕ್ತನಾಗಿದ್ದಾನೆಂಬ ಕನಸೇ ಆಕೆಯನ್ನು ಇನ್ನೂ ಜೀವಂತವಾಗಿಟ್ಟಿರುವುದು. ನೀವೆಲ್ಲಾ ಸೇರಿ ಸಂಗಪ್ಪನವರಿಗೆ ಲಗ್ನ ಮಾಡಿಸಿದ ಕೂಡಲೆ ಆಕೆ ತೀರಿಕೊಂಡರೆ ಸಂಗಪ್ಪನವರ ಮನಸ್ಸಿಗೆ ಎಂಥ ಪೆಟ್ಟು ತಾಕುತ್ತದೆ ವಿಚಾರಮಾಡಿ. ತಾನೇ ಕೈಯಾರ ಹೆಂಡತಿಯನ್ನು ಕೊಂದೆನೆಂದು ಅವರು ಭಾವಿಸುವುದಿಲ್ಲವೇ?"

"ನೀವು ಹೇಳುವುದು ನಿಜ. ಅವನು ಆ ಮಾತನ್ನು ಸ್ಪಷ್ಟ ಹೇಳಿಯೇ ಇದ್ದಾನೆ."

"ಹಾಗಾದರೆ ಏನು ಮಾಡಬೇಕೆನ್ನುವಿರಿ?"

"ಕೆಲವು ದಿವಸಗಳ ಕೆಳಗೆ ಈ ಮಾತು ಪುನಃ ಹೊರಟಿತು. ಸಂಗಪ್ಪ ಬೇಸರಮಾಡಿಕೊಂಡು 'ಸುಮ್ಮನೆ ಯಾಕೆ ಪೀಡಿಸುತ್ತೀಯೆ ಮಾಸ್ತರ್. ದೇವರ ಇಚ್ಛೆ ನನಗೆ ಸುಖಕೊಡಬೇಕೆಂದಿಲ್ಲ' ಎಂದ. 'ನೀನು ಲಗ್ನವಾಗಬಹುದೆಂದು ದೇವರು ಹೇಳಿದರೆ ಒಪ್ಪುವೆಯಾ'

ಎಂದೆ. ಅವನು ನಕ್ಕು 'ನನ್ನ ಅಲ್ಪ ವ್ಯವಹಾರಕ್ಕೆ ದೇವರು ಅಲ್ಲಿಂದ ಇಲ್ಲಿಗೆ ಅವತರಿಸುತ್ತಾನೆಯೇ ?' ಎಂದು ಕೇಳಿದ. ಅದಕ್ಕೆ ನಾನು, 'ನೋಡು ಸಂಗಣ್ಣ, ಕರುಣಾಕರ ಮಹರ್ಷಿಗಳನ್ನು ನೀನು ದೇವರೆಂದೇ ಭಾವಿಸಿಕೊಂಡು ಪೂಜಿಸುತ್ತಿರುವೆ. ಅವರ ಆಶ್ರಮಕ್ಕೆ ಹೋಗೋಣ. ಅವರನ್ನು ಒಂದು ಮಾತು ಕೇಳೋಣ. ಅವರು ಆಗಬಹುದು ಎಂದರೆ ನೀನು ಒಪ್ಪುವೆಯೋ' ಎಂದೆ. ಅದಕ್ಕವನು 'ಅವರು ಖಂಡಿತ ಒಪ್ಪುವುದಿಲ್ಲ' ಎಂದ. ನಾನು 'ಅವರು ಏನು ಹೇಳುತ್ತಾರೆ ಎಂದು ತರ್ಕಮಾಡುವುದು ಬೇಡ. ಅವರು ಪರವಾನಗಿ ಕೊಟ್ಟರೆ ನೀನು ಬೇರೆ ಲಗ್ನವಾಗತಕ್ಕದ್ದು. ಅವರು ಒಪ್ಪದಿದ್ದರೆ ನೀನು ಮನಸ್ಸು ಬಂದಂತೆ ಮಾಡಬಹುದು. ನಾನು ಮತ್ತೆ ಈ ಪ್ರಸ್ತಾಪ ನಿನ್ನ ಮುಂದೆ ಮಾಡುವುದಿಲ್ಲ.' ಸಂಗಣ್ಣ ಸ್ವಲ್ಪ ಹೊತ್ತು ಯೋಚಿಸಿ 'ಆಗಬಹುದು. ಬೆಂಗಳೂರಿಗೆ ರಾಯರಿಗೆ ಒಂದು ತಾರು ಕಳುಹಿಸು. ಕೂಡಲೆ ಹೊರಡುವ' ಎಂದ. ಅದರಂತೆ ನಾವಿಬ್ಬರೂ ಹೊರಟು ಬಂದಿದ್ದೇವೆ."

ಶಂಕರಪ್ಪನ ಮುಗ್ಧ ವಾದಸರಣಿ ನನಗೆ ನಗೆ ಬರಿಸಿತು. ಅವನು ಈ ಸಮಸ್ಯೆಯ ಪರಿಹಾರಕ್ಕೆ ಹುಡುಕಿದ ಉಪಾಯ ಬಹು ವಿಚಿತ್ರವಾದುದೆನಿಸಿತು. ಹೇಗಾದರೂ ಆಗಲಿ, ಈ ವಿಷಯ ಒಮ್ಮೆ ಇತ್ಯರ್ಥವಾಗಿ ಹೋಗಲಿ ಎಂದು ಅವನ ಜತೆ ಕರುಣಾಶ್ರಮಕ್ಕೆ ಹೊರಡಲನುವಾದೆ.

ಮಾರನೆಯ ಬೆಳಿಗ್ಗೆಯೇ ಹೊರಟುಬಿಟ್ಟೆವು. ಸಂಜೆ ಕೊಯಿಮುತ್ತೂರು ತಲಪಿದೆವು. ಎಂಟುಗಂಟೆ ಸುಮಾರಿಗೆ ಪೆರೂರಿಗೆ ಒಂದು ಬಸ್ಸಿದೆ ಎಂದು ತಿಳಿದುಬಂತು. ಆ ಬಸ್ಸು ಹಿಡಿದು ಹೊರಟೆವು. ಅದು ಮಧ್ಯೆ ಸ್ವಲ್ಪ ಕೆಟ್ಟು ರಿಪೇರಿಯಾಗಿ ಪೆರೂರು ತಲಪುವ ವೇಳೆಗೆ ರಾತ್ರಿ ೧೧—೩೦ ಆಗಿತ್ತು.

ಇಂಥ ಸಮರಾತ್ರಿಯಲ್ಲಿ ಆಶ್ರಮಕ್ಕೆ ಹೋಗಿ ಅಲ್ಲಿ ಎಲ್ಲರನ್ನೂ ಏಕೆ ಎಚ್ಚರಿಸಬೇಕೆಂದು ಒಂದು ಛತ್ರ ಹುಡುಕಿಕೊಂಡು ಹೊರಟೆವು. ಛತ್ರವೂ ಸಿಕ್ಕಿತು. ಒಳಗೆ ಮಲಗಿದ್ದ ಆಳನ್ನು ಎಬ್ಬಿಸಬೇಕಾದರೆ ಛತ್ರದ ಬಾಗಿಲಲ್ಲಿ ಅರ್ಧ ಗಂಟೆ ಶಂಖವಾದ್ಯ ಬಾರಿಸಬೇಕಾಯಿತು.

ಆಳು ಎದ್ದು ಹಾಸಿಗೆಯ ಮೇಲೆ ಕುಳಿತು 'ಇಲ್ಲಿ ಸ್ಥಳವಿಲ್ಲ' ಎಂದು ಗದರಿಕೊಂಡ. 'ಕರುಣಾಶ್ರಮ' ವೇ ಗತಿಯೆಂದು ಆಶ್ರಮಕ್ಕೇ ಹೋಗಲು ನಿಶ್ಚಯಿಸಿ ನಮ್ಮ ಸಾಮಾನುಗಳನ್ನು ಒಯ್ಯಲು ಒಂದು ಗಾಡಿ ಹುಡುಕಲಾರಂಭಿಸಿದೆವು. ಸ್ವಲ್ಪ ಶೋಧನೆ ನಡೆಸಿದ ಮೇಲೆ ಒಂದು ಗಾಡಿ ಕಣ್ಣಿಗೆ ಬಿತ್ತು. ಅದರ ಯಜಮಾನ, ಗಾಡಿಯ ಬಳಿಯಲ್ಲೇ ಮಲಗಿದ್ದ. ಅವನನ್ನೆಬ್ಬಿಸಿ, ಅವನಿಂದ ಬಯ್ಯಿಸಿಕೊಂಡು ಕೊನೆಗೆ ಅವನನ್ನು ಒಪ್ಪಿಸಿದೆವು. ಬಾಡಿಗೆ ಐದು ರೂಪಾಯಿ ಎಂದ. 'ದೇವರೇ ಗತಿ' ಎಂದು ಒಪ್ಪಿಕೊಂಡು ಆಶ್ರಮ ತಲಪುವ ವೇಳೆಗೆ ರಾತ್ರಿ ಎರಡು ಗಂಟೆಯಾಗಿತ್ತು.

ಗಾಡಿಯಾಳೇ ನಮ್ಮನ್ನು ದೇಶೀ ಅತಿಥಿ ಮಂದಿರದ ಬಳಿ ಗೊಯ್ದು, ಅಲ್ಲಿನ ಮೇಲ್ವಿಚಾರಕನನ್ನೆಬ್ಬಿಸಿ, ಮಲಗಲು ಸ್ಥಳ ದೊರಕಿಸಿ, ಕೊಟ್ಟ. ಹೊಟ್ಟೆತುಂಬ ನೀರು ಕುಡಿದು ಮಲಗಿದೆವು.

ಬೆಳಿಗ್ಗೆ ಆರು ಗಂಟೆಗೆ ಮೇಲ್ವಿಚಾರಕ ನಮ್ಮನ್ನು ಹೊಡೆದೆಬ್ಬಿಸಿದ. ಆಶ್ರಮದಲ್ಲಿ ಆರು ಗಂಟೆಯಾದ ಮೇಲೆ ಯಾರೂ ಮಲಗಬಾರದೆಂದು ಕಾಯಿದೆಯಂತೆ!

ಮುಖಮಾರ್ಜನ, ಸ್ನಾನ ತೀರಿಸಿಕೊಂಡು ಧರ್ಮಾಧಿಕಾರಿಗಳ ದರ್ಶನ ಪಡೆದು ಆಶ್ರಮದ ಅತಿಥಿಗಣಕ್ಕೆ ಸೇರಿದ್ದೂ ಆಯಿತು. ಏಳೂ ವರೆಗೆ ಸರಿಯಾಗಿ ಆಶ್ರಮದಲ್ಲಿ ಸೊಗಸಾದ ಬಿಸಿ ಬಿಸಿ ಇಡ್ಡಲಿ, ಕಾಫಿ ಸರಬರಾಯಿ ಆಯಿತು. ನಮಗೆ ಸ್ವಲ್ಪ ಜೀವ ಬಂದಂತಾಯಿತು.

ಆಶ್ರಮದ ಕಟ್ಟುಕಟ್ಟಳೆಗಳ ಕಂಠಪಾಠಮಾಡಿಕೊಂಡು ಮಹರ್ಷಿಗಳ ದರ್ಶನಕ್ಕೆ ಹೋಗುತ್ತಿದ್ದೆವು. ಎರಡು ದಿನಗಳು ಕಳೆದವು. ಮಧ್ಯೆ ಕೆಲವು ಸಲ ಮಹರ್ಷಿಗಳೊಂದಿಗೆ ಮಾತನಾಡಲು ಪ್ರಯತ್ನಿಸಿದೆವು. ಧರ್ಮಾಧಿಕಾರಿ ಅವಕಾಶ ಕೊಡಲಿಲ್ಲ.

ಆಶ್ರಮದ ಸೊಗಸಾದ ಇಡ್ಡಲಿ, ಕಾಫಿ, ಊಟ ಹೊಡೆದು ಸಾಕಾಯಿತು. ಬಂದ ಕೆಲಸ ಆಗಿರಲಿಲ್ಲ; ಆಗುವ ಸಂಭವವಿರಲಿಲ್ಲ. ಸಂಗಪ್ಪ, ಶಂಕರಪ್ಪ ಇಬ್ಬರೂ ಬೇಸರಗೊಂಡರು.

"ಇಂದು ನೀವು ಸ್ವಲ್ಪ ಪ್ರಯತ್ನಿಸಿ ರಾಯರೇ, ಮಹರ್ಷಿಗಳ

ಜತೆ ಇಂದೂ ಮಾತನಾಡಲು ಸಾಧ್ಯವಾಗದಿದ್ದರೆ ಊರಿಗೆ ಹಿಂದಿರು ಗೋಣ ''

ಎಂದು ಸಂಗಪ್ಪ ಹೇಳಿದ.

ನಾನು ಧರ್ಮಾಧಿಕಾರಿಯನ್ನು ಆಶ್ರಯಿಸ ತೊಡಗಿದೆ. ಅಲ್ಲಿ ಓಡಿಯಾಡುತ್ತಿದ್ದ ಐರೋಪ್ಯ ಮತ್ತು ಪಾರ್ಸಿ ಅತಿಥಿಗಳ ಆರ್ಭಟದಲ್ಲಿ ಬಡ ದೇಶೀ ಅತಿಥಿಗಳ ಕೂಗು ಧರ್ಮಾಧಿಕಾರಿಗಳ ಕಿವಿಯ ಮೇಲೆ ಬೀಳುತ್ತಲೇ ಇರಲಿಲ್ಲ. ಮಧ್ಯಾಹ್ನ ಧರ್ಮಾಧಿಕಾರಿಗಳನ್ನು ಹಿಡಿದು ನಿಲ್ಲಿಸಿ

" ನನ್ನ ಗೆಳೆಯರು ಧಾರವಾಡದಿಂದ ಬಂದಿದ್ದಾರೆ. ಮಹರ್ಷಿ ಗಳನ್ನು ಒಂದು ಪ್ರಶ್ನೆ ಕೇಳಬೇಕೆಂದಿದ್ದಾರೆ. ನಾವು ಬಂದು ಎರಡು ದಿನಗಳಾದವು. ಇಂದು ಅಷ್ಟು ಕೆಲಸ ತಾವು ಮಾಡಿಕೊಟ್ಟರೆ ಸಂಜೆಗೆ ನಾವು ಊರಿಗೆ ಹೊರಡುತ್ತೇವೆ'' ಎಂದೆ.

ನನ್ನ ಔದ್ಧತ್ಯಕ್ಕೆ ಬೆರಗಾಗಿ ದುರುಗುಟ್ಟಿಕೊಂಡು ನೋಡುತ್ತಾ

" ಪ್ರಶ್ನೆ ಬರೆದು ಕೊಡಿ—ಸಂಜೆಗೆ ಮಹರ್ಷಿಗಳ ಜತೆ ಮಾತ ನಾಡುವ ಅವಕಾಶ ಮಾಡಿಕೊಡುತ್ತೇನೆ'' ಎಂದ.

ಪ್ರಶ್ನೆಯನ್ನು ಬರೆಯಿಸಿ ಧರ್ಮಾಧಿಕಾರಿಗಳಿಗೆ ಒಪ್ಪಿಸಿ ಸಂಜೆ ಯಾಗುವುದನ್ನೇ ಕಾಯುತ್ತಿದ್ದೆ.

ಮಹರ್ಷಿಗಳ ಸಂಜೆ ದರ್ಬಾರ್ ಆರಂಭವಾಯಿತು. ಭಕ್ತಾದಿ ಗಳು ಬಂದು ಬಗೆಬಗೆಯ ನಮಸ್ಕಾರ ಹಾಕುತ್ತಿದ್ದರು. ಸ್ವಲ್ಪ ಹೊತ್ತಾದ ಮೇಲೆ ಧರ್ಮಾಧಿಕಾರಿ ನಮ್ಮ ಚೀಟಿಯನ್ನು ಮಹರ್ಷಿಗಳಿಗೊಪ್ಪಿಸಿ ಏನೋ ಪಿಸುಗುಟ್ಟಿದ. ಅವರು ಚೀಟಿ ನೋಡಿಕೊಂಡು ಏನೋ ಸೂಚಿಸಿದರು. ಹೆಡ್‌ಮಾಸ್ತರ್ ಅವಿಧೇಯ ಬಾಲಕರನ್ನು ಕರೆಯು ವಂತೆ ಧರ್ಮಾಧಿಕಾರಿ ನಮ್ಮನ್ನು ಕರೆದ. ನಾವು ಹೋಗಿ ಮಹರ್ಷಿಗಳ ಮುಂದೆ ಕೈಕಟ್ಟಿ ನಿಂತುಕೊಂಡೆವು. ಮಹರ್ಷಿಗಳು ಕೇಳಿದರು :

" ಇದು ಯಾರ ಪ್ರಶ್ನೆ ? "

" ನನ್ನದು '' ಎಂದು ಸಂಗಪ್ಪ ಹೇಳಿದ.

" ಆಗ ಬೇಕಾದದ್ದು ಆಗುತ್ತದೆ. ಯಾವದೂ ಮನುಷ್ಯ ಪ್ರಯತ್ನ ದಿಂದಾಗುವುದಿಲ್ಲ. ಎಲ್ಲಾ ಸುಬ್ರಹ್ಮಣ್ಯಸ್ವಾಮಿಯ ಲೀಲೆ "

ಎಂದರು. ಧರ್ಮಾಧಿಕಾರಿ ಹೆಚ್ಚುಮಾತಿಗೇ ಅವಕಾಶ ಕೊಡದೆ ನಮ್ಮನ್ನು ' ನಡೆಯಿರಿ ' ಎಂದ.

ಅಲ್ಲಿ ನಾವು ನಿಲ್ಲಲಿಲ್ಲ. ನಮ್ಮ ಬಿಡಾರಕ್ಕೆ ಬಂದು ಗಂಟು ಮೂಟೆ ಕಟ್ಟಿದೆವು. ಹೋಗುವ ಮೊದಲು ಧರ್ಮಾಧಿಕಾರಿಗಳನ್ನು ಕಂಡು ನಮ್ಮ ಕಾಣಿಕೆಯರ್ಪಿಸಿ ಹೋಗೋಣವೆಂದು ಅವರ ಕಛೇರಿಗೆ ಬಂದೆವು.

ಧರ್ಮಾಧಿಕಾರಿಗಳು ನಂಜೆ ದರ್ಬಾರ್ ಮುಗಿಸಿಕೊಂಡು ಕಛೇರಿ ಯಲ್ಲಿ ಬಂದು ಕುಳಿತಿದ್ದರು. ನಾವು ಮೂವ್ವರೂ ಹೋಗಿ ಅವರ ಎದುರು ಕುಳಿತೆವು. ಅವರು ಕತ್ತೆತ್ತಿ ನೋಡುವ ಪ್ರಯಾಸಪಡಲಿಲ್ಲ. ನಾಲಭಂಜಿಕೆಗಳ ಹಾಗೆ ನಾವು ಕುಳಿತಿದ್ದುದು ಅವರ ಗಮನಕ್ಕೇ ಬರಲಿಲ್ಲ. ನಮಗೆ ಬಸ್ಸಿಗೆ ಹೊತ್ತಾಗುತ್ತಿತ್ತು. ಹೆಚ್ಚು ಹೊತ್ತು ಧರ್ಮಾಧಿಕಾರಿಗಳು ' ಪ್ರತ್ಯಕ್ಷ ' ರಾಗುವುದನ್ನು ಕಾಯುವುದಕ್ಕೆ ಕಾಲಾ ವಕಾಶವಿರಲಿಲ್ಲ. ನಾನು ತಮಿಳಿನಲ್ಲಿ

" ನಾವು ಈಗ ಹೊರಟಿದ್ದೇವೆ. ನಿಮಗೆ ತಿಳಿಸಿ ಹೋಗಲು ಬಂದೆವು."

ಧರ್ಮಾಧಿಕಾರಿಗಳು ಉಸಿರೆತ್ತಲಿಲ್ಲ.

" ನನ್ನ ಗೆಳೆಯರೂ ನಾನೂ ಸ್ವಲ್ಪ ಪಣವನ್ನು ಕಾಣಿಕೆಯಾಗಿ ಅರ್ಪಿಸಿ ಹೋಗಬೇಕೆಂದು ಬಂದಿದ್ದೇವೆ " ಎಂದೆ.

' ಪಣ ' ಶಬ್ದ ಕಿವಿಯ ಮೇಲೆ ಬಿದ್ದ ಕೂಡಲೆ ಧರ್ಮಾಧಿಕಾರಿಗಳು ಕತ್ತೆತ್ತಿ ನೋಡಿ

" ಕೊಡಿ " ಎಂದರು.

ನಾವು ಕೂಡಿಸಿದ ಅರವತ್ತು ರೂಪಾಯಿಗಳನ್ನು ಅವರ ಕೈಗೆ ಹಾಕಿದೆವು. ಧರ್ಮಾಧಿಕಾರಿಗಳು ತಮ್ಮ ಗುಮಾಸ್ತನಿಗೆ

" ಹಣ ಲೆಕ್ಕಕ್ಕೆ ಹಚ್ಚಿಕೋ "

ಎಂದರು. ನಾವು ಎದ್ದು ' ಬರುತ್ತೇವೆ, ನಮಸ್ಕಾರ ' ಎಂದೆವು.

ಧರ್ಮಾಧಿಕಾರಿ ಮತ್ತೆ ಕತ್ತೆತ್ತಿ ನೋಡಲಿಲ್ಲ; ನಮಗೆ ಪ್ರತಿ ನಮಸ್ಕಾರ ಹೇಳಲಿಲ್ಲ.

ಕೂಡಲೆ ಕೊಯಿಮತ್ತೂರು ದಾರಿ ಹಿಡಿದು ಮಾರನೆಯ ಬೆಳಿಗ್ಗೆ ಬೆಂಗಳೂರು ತಲಪಿದೆವು

ಸಂಗಪ್ಪ, ಶಂಕರಪ್ಪ ಇಬ್ಬರೂ ಮಹರ್ಷಿಗಳ ಸಂದೇಶ ಕೇಳಿ ಅವಾಕ್ಕಾಗಿದ್ದರು. ಒಂದು ದಿನವೆಲ್ಲಾ ಅವರಿಂದ ಈ ವಿಷಯ ಮಾತೇ ಹೊರಡಲಿಲ್ಲ. ರಾತ್ರಿ ಊಟ ಮುಗಿಸಿ ನಾವು ಹರಟೆಗೆ ಕುಳಿತಾಗ ನಾನು ಕೇಳಿದೆ,

"ಏನು ಮಾಸ್ತರ್, ಮಹರ್ಷಿಗಳಿಂದ ಬೆಳಕು ಸಿಕ್ಕಿತೋ ?"

ಸಂಗಪ್ಪ ತಲೆ ತಗ್ಗಿಸಿದ.

ಶಂಕರಪ್ಪ ಉತ್ತರ ಹೇಳಲಿಲ್ಲ.

"ಈ ಉತ್ತರ ಪಡೆಯುವುದಕ್ಕೆ ಇಲ್ಲಿಂದ ಪೆರೂರಿಗೆ ಹೋಗ ಬೇಕಾಗಿತ್ತೇ. ನಾನೇ ಈ ಉತ್ತರ ಇಲ್ಲಿಯೇ ಹೇಳಿಬಿಡುತ್ತಿದ್ದೆನಲ್ಲಾ"

ಎಂದು ನಗೆಯಾಡಿದೆ.

ಇಬ್ಬರೂ ಮಾತೇ ಆಡಲಿಲ್ಲ.

"ಮಾಸ್ತರ್—ಮಹರ್ಷಿಗಳನ್ನು ನೋಡಿ ನಿಮಗೇನನಿಸಿತು"

"ಅವರ ಮುಂದೆ ಕುಳಿತರೆ ಮನಸ್ಸಿಗೆ ಏನೋ ಶಾಂತಿ ಬಂದಂತೆ ಆಗುತ್ತಿತ್ತು. ಇದೊಂದು ವಿಚಿತ್ರ ಅನುಭವ ನನಗೆ."

"ನಿಮಗೆ ಸಂಗಪ್ಪನವರೇ ?"

"ನನಗೂ ಅದೇ ಅನುಭವವಾಯಿತು."

"ಶಾಂತಿ ಆತ್ಮಜನ್ಯವಲ್ಲವೇ ಮಾಸ್ತರ್. ಹೊರಗಿನವರು ಎಷ್ಟೇ ದೊಡ್ಡವರಾದರೂ ಶಾಂತಿ ಕೊಡಬಲ್ಲರೇ ? ಪ್ರತಿಯೊಬ್ಬ ಮಾನವನೂ ಅವನ ಸಂಸ್ಕಾರ ಅವನೇ ದೊರಕಿಸಿಕೊಳ್ಳಬೇಕು. ಮಹರ್ಷಿಗಳೇ ಆಗಲಿ, ಯಾರೇ ಆಗಲಿ ನಮಗೆ ಶಾಂತಿ ನೀಡಿ, ನಮ್ಮ ಸಮಸ್ಯೆಗಳನ್ನು ಬಗೆ ಹರಿಸುತ್ತಾರೆಂಬುದು ಅಜ್ಞಾನದ ಲಕ್ಷಣವಲ್ಲವೇ ? ಪ್ರತಿಯೊಬ್ಬನೂ ಮನದಲ್ಲಿ ಮಹರ್ಷಿಯಾಗಬೇಕು—ಆಗಲೇ ಅವನಿಗೆ ಶಾಂತಿ"

ನನ್ನ ಮಾತು ಅವರಿಬ್ಬರ ಮೇಲೆ ಯಾವ ಪರಿಣಾಮ ಮಾಡಿತೊ